ಮಕ್ಕಳ ನಾಟಕ

# ಜಯಂಟ್ ಮಾಮಾ



ಕೆ. ವಿ. ಸುಬ್ಬಣ್ಣ

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ

GIANT MĀMĀ — (Kannada) A Play for Children by K. V. Subbanna ; Printed at Sagar Mudrana, Sagar, Karnataka and published by Akshara Prakashana, Sagara (Karnataka) 577401 ; First Impression— Jan 1984 ; 1000 Copies ; Pages ; 51 Price-Rs. Five

ಬೆಲೆ : ಐದು ರೂಪಾಯಿ

The Selfish Giant ಎನ್ನುವ ಆಸ್ಕರ್‌ವೈಲ್ಡ್‌ನ ಕಾಲ್ಪನಿಕ-ರಾಕ್ಷಸ-ಕಥೆ ಪ್ರಸಿದ್ಧವಾದದು. ಅದನ್ನಾಧರಿಸಿ ಒಂದು ಮಕ್ಕಳ ನಾಟಕ ತಯಾರಿಸಲು ಹೊರಟಾಗ, ಅಂತಿಮವಾಗಿ ಅದು ಮತ್ತೊಂದು ಹೊಸ ರೂಪವನ್ನೇ ತಾಳಿಕೊಂಡಿತು. ಅದೇ– **ಜಯಂಟ್‌ನಾಮಾ**.

ಆಸ್ಕರ್‌ವೈಲ್ಡ್‌ನ ರಾಕ್ಷಸ-ಕಥೆಯು ಕಾಲ್ಪನಿಕ ಚಿತ್ರವನ್ನು ತಂದು ನಮ್ಮ ಸಮಕಾಲೀನ ಔದ್ಯೋಗಿಕ ಕಾಲೋನಿಯ ವಾಸ್ತವ ಚಿತ್ರದ ಮೇಲೆ ಉಪರಿ ಮುದ್ರಿಸಿ ಈ ನಾಟಕವನ್ನು ರೂಪಿಸಿದೆ. ಮಕ್ಕಳ ಮನಸ್ಸು ಕಲ್ಪಕತೆಯಲ್ಲಿ ಶ್ರೀಮಂತವಾದದ್ದು ಎನ್ನುವುದು ನಮಗೆಲ್ಲ ಗೊತ್ತು. ಈ ಕಲ್ಪಕತೆ, ಎದುರಿರುವ ವಾಸ್ತವವನ್ನು ಕಡೆಗಣಿಸಿ, ಇದರಿಂದ ಬಿಡಿಸಿಕೊಂಡು ಬೇರೊಂದು ಸ್ತರದಲ್ಲಿ ಸುಸುಳಿಕೊಳ್ಳುವುದಲ್ಲ. ಎದುರಿರುವ ಮೂರ್ತವಾಸ್ತವದಲ್ಲೇ ಕಲ್ಪಕತೆಯನ್ನು ಸೃಜಿಸಿಕೊಳ್ಳುವಂಥದ್ದು. ಮಕ್ಕಳ ಇಂಥ ಸೃಜನಶೀಲ ಕಲ್ಪಕತೆಯನ್ನು ರಂಗದಲ್ಲಿ ದುಡಿಸಿಕೊಳ್ಳುವ ದೃಷ್ಟಿಯಿಂದಲೇ ರಚಿತವಾದ ಈ ನಾಟಕ, ಹಾಗೆ ಹೊಸ ರೀತಿಯ ಪ್ರಯೋಗವೆನ್ನಬಹುದು.

**ಪ್ರಥಮ ಪ್ರದರ್ಶನ :**

ನೀನಾಸಮ್ ಮಕ್ಕಳ ಬಳಗದಿಂದ

ತಾ.14, 15 ಜುಲೈ 1983

ಶಿವರಾಮಕಾರಂತ ರಂಗಮಂದಿರದಲ್ಲಿ

**ನಿರ್ದೇಶನ : ಕೆ. ಜಿ. ಕೃಷ್ಣಮೂರ್ತಿ**

**ಪಾತ್ರಗಳು :**

ರಾಕ್ಷಸ
ಹನುಮನಾಯಕ
ಚೀಫ್ ಎಂಜಿನೀರ್
ಮುದುಕ ಮೇಷ್ಟ್ರು
ಸಿಸ್ಟರ್
ಪೋಲೀಸರು

ಚಾಕು
ಚೀರ
ರಾಮು
ಬಿಂಕು
ಚೆನ್ನ
ಬಾಳು
ಬಂಟು
ತಂಪ
ಸೊಂಪ

ಜೇನಿ
ಮೀನಿ
ಸೋನಿ
ಬಾನಿ
ಮಿನ್ನಿ
ಮಿಟ್ಟಿ
ಸುಗ್ಗಿ
ಜೆಟ್ಟಿ

ವಾದ್ಯಗಾರರು

ಇತ್ಯಾದಿ

# ಜಯಂಟ್ ಮಾಮಾ

ನಾಟಕ ಪ್ರಾರಂಭವಾಗುವ ಮೊದಲು ಸ್ವಲ್ಪಕಾಲ ಕತ್ತಲಲ್ಲೇ ಮಕ್ಕಳ ಆಟದ ಗದ್ದಲ, ಆಟದ ಘೋಷಣೆಗಳು ಇತ್ಯಾದಿ ಕೇಳುತ್ತಿರುತ್ತದೆ. ನಾಟಕ ಪ್ರಾರಂಭವಾಗಿ ಕ್ರಮೇಣ ಬೆಳಕು ಹರಿದ ಹಾಗೆ ಹಿನ್ನೆಲೆಯಲ್ಲಿ ಒಂದು ಆಣೆಕಟ್ಟು, ಅದರ ಕೆಳಗಿನ ಅಂಗಳ, ಪಾರ್ಕ್‌ನ ಹಾಗೆ ಕಾಣುವ ಗಿಡಮರಗಳು ಇತ್ಯಾದಿ ಕಾಣಿಸುತ್ತವೆ. ಅಲ್ಲಿ ಮಕ್ಕಳು ಆಡುತ್ತಿದ್ದಾರೆ. ಮಕ್ಕಳ ಆಟದ ತ್ವರಿತ ಚಲನೆಯಲ್ಲಿ ನೃತ್ಯಗತಿಯೂ ಅವರ ಕೂಗು ಗದ್ದಲಗಳಲ್ಲಿ ಸ್ವರ ಮೇಳವೂ ಇದೆ.

ಸ್ವಲ್ಪ ಹೊತ್ತಿನ ಅನಂತರ—ಮುನ್ನೆಲೆಯಲ್ಲಿ ಕೋಡಂಗಿ ಕುಣಿತ ಕುಣಿಯುತ್ತ ಹನುಮು ನಾಯಕನ ಪ್ರವೇಶ—ದಿಗ್ಭ್ರಮೆಯಲ್ಲಿ.

ಹನುಮು : ಅಲೆ !.... ಅಲಲೆ !... ಅಲೆಲೆಲಲೆಲೆ !....

ಹಾಗೇ ದಿಗ್ಭ್ರಮೆಯಿಂದ ಎಲ್ಲವನ್ನೂ ನೋಡುತ್ತ ನೋಡುತ್ತ ಅದೇ ಗತಿಯಲ್ಲೇ ನಿಷ್ಕ್ರಮಿಸುತ್ತಾನೆ. ಆಮೇಲೆ, ಚೀಫ್ ಎಂಜಿನೀರ್, ಮುದುಕಮೇಷ್ಟರು ಮತ್ತು ಕಾನ್ವೆಂಟ್ ಸಿಸ್ಟರ್—ಪ್ರವೇಶಿಸುತ್ತಾರೆ.

ಚೀಫ್ : Understand ? ತಿಳೀತಾ ? ಮಕ್ಕಳು ಅಂದ್ರೆ ಅವರೇ ಮುಂದಿನ ರಾಷ್ಟ್ರದ ಜನಾಂಗ, ಸಂಪತ್ತು. ನಾವು ಯಾಕೆ ಶ್ರಮಾ ಪಡ್ಬೇಕು ? ಅವರಿಗೋಸ್ಕರ ವಾಗಿ ! understand ?

ಸಿಸ್ಟರ್ : ಎಸ್, ಸರ್.

ಮೋಷ್ಟ್ಸ್ : ನಾ ಹೇಳೋಕೆ ಬಂದದ್ದು ಅಂತಂದ್ರೆ, ಸುಡುಗಾಡು ಸುಂಟಿ ಮಕ್ಕಳಿಗಾಗಿ ನೇವೇಯೇ..........

ಚೀಫ್ : ನಾ ಹೇಳ್ತಾ ಇದೀನಿ, ತಿಳೀತಾ ?.......ದೇಶ ಮುಖ್ಯ, ರಾಷ್ಟ್ರ ಮುಖ್ಯ

: ಅದೇನೋ ಹೇಳ್ತಾರಲ್ಲ – ಜನನೀ.......ಜನನೀ.......ಗರೀಯಸೀ.......

ಮೋಷ್ಟ್ಸ್ : ಜನನೀ ಜನ್ಮಭೂಮಿಶ್ಚ! ಸ್ವರ್ಗಾದಪಿ ಗರೀಯಸೀ ಅಂತಂದ್ಹೇಳಿ.......

ಚೀಫ್ : ತಿಳೀತಾ ? ರಾಷ್ಟ್ರದಲ್ಲಿ ಈ ನಮ್ಮ ಪ್ರಾಜೆಕ್ಟ್‌ನಂಥಾ ಯೋಜನೆಗಳು ಮುಖ್ಯ. ಪೂಜ್ಯ ನೆಹರೂಜಿ ಹೇಳಿದ ಹಾಗೆ ಇವೇ ನಮ್ಮ ರಾಷ್ಟ್ರದ ದೇವಾಲಯಗಳು–understand ? ಇವುಗಳ ರಕ್ಷಣೆ ನಮ್ಮ ಕರ್ತವ್ಯ ಪವಿತ್ರವಾದ ಕರ್ತವ್ಯ, ತಿಳೀತಾ ?

ಸಿಸ್ಟರ್ : ಎಸ್, ಸರ್.

ಮೋಷ್ಟ್ಸ್ : ಹಾಗಂತಂದ್ರೂ ಕೂಡಾನೂವೇ........

ಚೀಫ್ : ನೋನೋ ನೋನೋ ನೋನೋ ! ಬೇರೇ ಮಾತೇ ಇಲ್ಲ, understand ?.......ಇದು restricted area ಅಂತ ಸರ್ಕಾರ ಡಿಕ್ಲೇರ್ ಮಾಡಿದೆ. ಅದನ್ನ ಕಾಪಾಡೋದು ನಮ್ಮ ಕರ್ತವ್ಯ. ಮಕ್ಕಳನ್ನೇ ಆಗಲಿ, ಇಲ್ಲಿ ಬಿಡೋದು ಕಾನೂನಿಗೆ ವಿರುದ್ಧ. ಇನ್ನು ಇಲ್ಲಿ ಕಾಯೋದಕ್ಕೆ ಸೆಕ್ಯುರಿಟಿ ಗಾರ್ಡ್ಸ್ ಹಾಕ್ತೀವೆ. ಮಕ್ಕಳು ಆಡೋದಕ್ಕೆ ಬೇರೆ ಜಾಗಕ್ಕೆ ಹೋಗಬೇಕಾಗತ್ತೆ..........understand ?

ಸಿಸ್ಟರ್ : ಸರಿ, ಸರ್.

ಮೋಷ್ಟ್ಸ್ : ಆದ್ರೂ ಕೂಡಾ ನಾನೂನೂವೇ ನಾ ಯಾಕೆ ಹೇಳೋಕೆ ಬಂದೇ ಅಂತಂತಂದ್ರೆ.......ಸುಡುಗಾಡು ಸುಂಟಿ.......

ಚೀಫ್ : ನನಗೂ ಗೊತ್ತು. ಮಕ್ಕಳಿಗೆ ಈ ಊರಲ್ಲಿ ಸರಿಯಾದ ಆಟದ ಬಯಲಿಲ್ಲ.

ಸಿಸ್ಟರ್ ಹೌದು ಸರ್. ಅದೇ.

ಚೀಫ್ : ಅದಕ್ಕೆ ವ್ಯವಸ್ಥೆ ಮಾಡೋಣ, understand ?...... ಈ ಪ್ಲಾನ್‌ನಲ್ಲಿ ಆಗೋಲ್ಲ. ಫಂಡ್ಸ್ ಇಲ್ಲ. ಮುಂದಿನ ಪಂಚವಾರ್ಷಿಕ ಯೋಜನೇಲಿ

ಪರಿಶೀಲಿಸೋಣ ಪ್ರಯತ್ನಿಸೋಣಂತೆ.

ಮೇಷ್ಟ್ರು : ಹಾಗಂತಂತಂದ್ರೆ............ಸುಡುಗಾಡು ಸುಂಟಿ ಈ ಹುಡುಗರೆಲ್ಲ ಆ ಹೊತ್ತಿಗೆ ಮುದುಕರಾಗಿ ಬಿಡ್ತಾರಲ್ಲ ಅಂತಂತಂದು.......

ತಟ್ಟನೆ ಇಲ್ಲಿನ ದೃಶ್ಯ ಮೂಕವಾಗಿ ಹಿನ್ನೆಲೆಯು ಮಕ್ಕಳ ಆಟದ ಸದ್ದು ಮೊಳಗತೊಡಗುತ್ತದೆ. ಮುನ್ನೆಲೆಯಲ್ಲಿ ಚೀಫ್ ಇಂಜಿನಿಯರ್ ಕೋಪದಿಂದ ಕೈ ಬೀಸಿ ಕುಣಿದಾಡುತ್ತ, ಏನೋ ಹೇಳುತ್ತಿರುವುದು ಮೂಕ ದೃಶ್ಯವಾಗಿ ಕಾಣಿಸುತ್ತಿರುತ್ತದೆ. ಸ್ವಲ್ಪ ಹೊತ್ತಿನ ಮೇಲೆ. ಪುನಃ ಹಿನ್ನೆಲೆ ಮೂಕವಾಗಲು—

ಚೀಫ್ : understand ? ತಿಳೀತಾ ?

ಸಿಸ್ಟರ್ : ತಾವು ಹೇಳೋದು ಕರೆಕ್ಟೇ ಸರ್.

ಮೇಷ್ಟ್ರು : ಆದ್ರೂ ಕೂಡಾನೂವೇ ನಾಯಾಕೆ ಹೇಳೋಕೆ ಬಂದೆ ಅಂತಂತಂದ್ರೆ, ಸುಡುಗಾಡು ಸುಂಟಿ ಮಾನವತೆ ಅನ್ನೋದರ ದೃಷ್ಟಿಯಿಂದಾ...

ಚೀಫ್ : ಅಂದ್ರೆ ?...ಏನು ಮಾನವೀಯ್ತೆ ? ನಾವು ಮನುಷ್ಯರು ಅಲ್ವಾ ? ನಾವು ರಾಕ್ಷಸರಾ ?....

ತಟ್ಟನೆ ಹನುಮನಾಯಕನ ಪ್ರವೇಶ. ಕುಣಿತದಲ್ಲಿ. ಚೀಫ್ ಇಂಜಿನೀರ್ ಗುಂಪಿನ ಮಾತುಕತೆ ಮೂಕ ದೃಶ್ಯವಾಗಿ ಪರಿವರ್ತನಗೊಳ್ಳುತ್ತದೆ. ಹನುಮನಾಯಕನ ಪ್ರವೇಶ, ಅವನ ಮಾತು ಇದಾವುದೂ ಚೀಫ್ ಇಂಜಿನೀರ್ ಮತ್ತಿತರರಿಗೆ ಕಾಣಿಸುತ್ತಿಲ್ಲ ಎಂಬುದು ಭಾಸವಾಗುತ್ತದೆ.

ಹನುಮ : ಹೋಯ್, ತಾರಾತಿಗಡಿ ಚಿನ್ನದ ಬುಗುಡಿ, ಇದೇನು ಚೋದ್ಯವಯ್ಯಾ ಇದೇನು ಚೋದ್ಯ ! ನನಗೇ ದಿಕ್ಕು ತಪ್ಪಿ ಹೋಯಿತೋ ಅಂತ ಮತ್ತೆ ಮತ್ತೆ ನೋಡತ್ತೇನೆ, ಅಲ್ಲ. ಅಥವಾ ಕನಸೋ ಅಂತ ಯೋಚಿಸ್ತೇನೆ, ಆದರೆ ಮನುಷ್ಯರ ಹಾಗೆ ನಮಗೆ ಸಾವೂರು ಸಂತೆ ಕನಸಿನ ಕಂತೆ ಕಾಣಲಿಕ್ಕೇ ಇಲ್ಲವಲ್ಲ !....ಸ್ಥಳ ತಪ್ಪಲಿಲ್ಲ, ತಪ್ಪಲಿಲ್ಲ. ಬೆಟ್ಟದ ತಪ್ಪಲಲ್ಲೇ ಇದ್ದೇನಲ್ಲ. ಅದೇ ಕಾಡು, ಅದೇ ಹೊಳೆ. ನಾವು ಊರು ಬಿಟ್ಟು ಎಷ್ಟು ದಿನವಾಯ್ತಯ್ಯಾ ಅಂತ ಯೋಚಿಸುವುದಾದರೆ—ದಿನವಲ್ಲಾ ಮಾಸಗಳು, ಮಾಸಗಳಲ್ಲಾ ಋತುಗಳು, ಋತುಗಳಲ್ಲಾ ಅಯನಗಳು, ಅಯನಗಳಲ್ಲಾ ವರ್ಷಗಳು—ಸುಮಾರು ನಾಕೆಂಟು ಹತ್ತಿಪ್ಪತ್ತು ವತ್ಸರಗಳೇ ಕಳೆದು

ಬಿಟ್ಟಿವೆ. ನಾವು ಊರುಬಿಟ್ಟು ಈ ಅವಧಿಯಲ್ಲಿ ಇಲ್ಲಿ—ಬಾಳೇ ಬದಲು ಕಂಚಿನ ಕದಲು ಅಂತ, ಈ ಹೊಳೇಗೆ ಒಂದು ಆಣೆಕಟ್ಟೆ ಕಟ್ಟಿಬಿಟ್ಟಿದಾರೆ, ಯಂತ್ರತಂತ್ರ ಸ್ಥಾಪಿಸಿಬಿಟ್ಟಿದ್ದಾರೆ. ಆಕಾಶದ ತುಂಬಾ ತಂತೀ ಎಳದು ಬಿಗದು ಕಟ್ಟಿ ಬಿಟ್ಟಿದ್ದಾರೆ. ಅಂಚುಕಟ್ಟಿ ಮಿಂಚು ಬೆಳೀತಿದಾರೆ !....ಈ ಕಡೆ ಒಂದು ಪಟ್ಟಣವೇ ಬೆಳಕೊಂಡು ಬಿಟ್ಟಿದೆಯಲ್ಲಾ, ಬೆಂಕೀ ಪಟ್ಟಣ ! ....ಎಲ ಎಲ ಎಲಾ ! ಇನ್ನು ಇಲ್ಲಿಂದ ಅರ್ಧಗಾವುದ ದೂರದಲ್ಲಿರುವಂಥಾ ನಮ್ಮ ಅರಮನೆಯಾದರೂ ಏನಾಗಿದ್ದೀತಯಾ ? ನೋಡಬೇಕು, ನೋಡ ಬೇಕು....(ಪ್ರೇಕ್ಷಕರಿಗೆ) ಏನಂದ್ರಿ ?.... (ಚೀಫ್ ಹತ್ತಿರ ಹೋಗಿ) ಇವ ರಿಗೆ ತಿಳಿದೀತಲ್ಲ ಅಂತಲೋ ? ಇಲ್ಲ ಇಲ್ಲ, ಕಣ್ಣಿಗೆ ಬೆಲ್ಲ. ನನಗೆ ಅವರು ಕಾಣಿಸ್ತಾರೆ, ಪರಂತು ಅವರಿಗೆ ನಾವು ಕಾಣಿಸೋಲ್ಲ. ಹೌದಯ್ಯ, ನಮ್ಮ ದಣಿಗಳಿಗೆ ಈಶ್ವರ ದೇವರದ್ದೇ ವರ ಉಂಟಲ್ಲ, ನಾವು ಮನುಷ್ಯ ಮಾತ್ರದ ಗಂಡುಗಳಿಗೂ ಕಾಣಲಿಕ್ಕಿಲ್ಲ, ಮನುಷ್ಯಮಾತ್ರದ ಹೆಣ್ಣುಗಳಿಗೂ ಕಾಣಲಿಕ್ಕಿಲ್ಲ—ಅಂತ. ನೋಡಿ ಬೇಕಾದರೆ ! ಕಣ್ಣಿಗೆ ಕನ್ನ, ಮಣ್ಣಿಗೆ ಅನ್ನ —(ಎನ್ನುತ್ತ ಚೀಫ್‌ನ ಸುತ್ತ ಸುಳಿದಾಡಿ ತೋರಿಸುತ್ತಾನೆ. ಅವನಿಗೆ ಈತ ಕಾಣುವುದೇ ಇಲ್ಲ.) ಇರಲಿ, ಸಮಯ ಹಾಳುಮಾಡತಕ್ಕದ್ದಲ್ಲ. ಇನ್ನೊಂದು ಸಲ ಈ ಬೆಂಕಿಪಟ್ಟಣ ಸುತ್ತಿ ಪರಿಶೀಲಿಸಿಯೇ ಬಿಡುವ. ಆಂಜನೇಯ ಸ್ವಾಮಿ ಲಂಕಾಪಟ್ಟಣವನ್ನು ಪರಿಶೀಲಿಸಿದ ಪ್ರಕಾರ ದಲ್ಲಿ........

ಎನ್ನುತ್ತ ನಿಷ್ಕ್ರಮಿಸುತ್ತಾನೆ. ಮತ್ತೆ ಚೀಫ್ ಇಂಜನಿಯರ್ ಗುಂಪು ಕೇಂದ್ರಗೊಳ್ಳು ತ್ತದೆ.

ಚೀಫ್ : understand ? ತಿಳೀತಾ ? ಇವತ್ತೇ ಕಡೆ. ನಾಳೆಯಿಂದಾ ಮಕ್ಕಳು ಬರ ಕೂಡದು. ಬೇರೆ ಯಾವುದಾದರೂ ಕಡೆ ಆಡಿಕೊಳ್ಳಲಿ. ಇಲ್ಲಿ ಮಾತ್ರ ಕಾಲಿಡಕೂಡದು. ಇವತ್ತು ಸಂಜೆಯಿಂದಲೇ ಸೆಕ್ಯುರಿಟ ಗಾರ್ಡ್‌ಗಳು ಇಲ್ಲಿ ಬಂದು ಹಾಜರಾಗ್ತಾರೆ, ಕಾವಲಿಗೆ. understand ?... ಮತ್ತೇನಾದರೂ ಮಕ್ಕಳು ಈ ಕಡೆ ಬಂದವು ಅಂದ್ರೆ, ಅವರನ್ನೂ (ಮೇಷ್ಟ್ರನ್ನು ನೋಡಿ) ಅವರಿಗೆ ಚಿತಾವಣೆ ಕೊಡುವವರನ್ನೂ ಹಿಡಿದು ಪೋಲೀಸ್‌ಗೆ ಕೊಟ್ಟು

ಬಿಡ್ತೇವೆ!....(ನಡೆಯುತ್ತಾನೆ. ಮತ್ತೆ ನಿಂತು ತಿರುಗಿ understand?.... (ನಿಷ್ಕ್ರಮಿಸುತ್ತಾನೆ.

ಮೇಷ್ಟ್ರು : (ಚೀಫ್ ಹೋದಕಡೆಗೇ ನೋಡುತ್ತ) ಹಾಗಂತಂದ್ರೂ ಕೂಡಾನೂನೂ ನೂವೇ.......

ತಟ್ಟನೆ ಕುಣಿತದಲ್ಲಿ — ಹನುಮನಾಯಕನ ಪ್ರವೇಶ. ಮೇಷ್ಟ್ರು ತನ್ನನ್ನೇ ನೋಡುತ್ತಿರುವುದರ ಅರಿವಾಗಿ ಆತ. ಅಲ್ಲೇ ಮರೆಯಾಗುತ್ತಾನೆ.

ಮೇಷ್ಟ್ರು : ಅಲೆ ಅಲೆ ಅಲೆ!... ಮೇಡಮ್ಮ, ನೋಡಿದೆಯಾ? ಹಾಗಂತ್ಹೇಳಿ, ಗಾಳೀಲಿ ನೆರಳು ಕುಣಿದುಕೋತಾ ಹೋಗಿಬಿಡ್ತಲ್ಲ...ಅಲೆ!....

ಸಿಸ್ಟರ್ : ಎಲ್ಲಿ ಸರ್, ಯಾವಾಗ?

ಮೇಷ್ಟ್ರು : ಇದೇ ಈಗ, ಕಣ್ಣೆದುರಿಗೇನೇ ಹೋಯ್ತಲ್ಲಮ್ಮಾ!

ಸಿಸ್ಟರ್ : ನಿಮಗೆಲ್ಲೋ ಭ್ರಮೆ ಬಿಡಿ, ಸರ್.

ಒಡನೆಯೇ ಇಲ್ಲಿ ಸದ್ದು ನಿಂತು ಮೂಕ ಅಭಿನಯ ನಡೆಯುತ್ತದೆ. ಹಿನ್ನೆಲೆಯ ಮಕ್ಕಳ ಆಟ ಸದ್ದುಗದ್ದಲ ಕೇಂದ್ರೀಕೃತವಾಗುತ್ತದೆ. ತುಸು ಹೊತ್ತು ಕಳೆದು ಮತ್ತೆ ಇಲ್ಲಿಗೇ ಕೇಂದ್ರ ಪಲ್ಲಟ.

ಮೇಷ್ಟ್ರು : ಹಾಗಂತ್ಹೇಳಿ—ನಾನು ಚಿಕ್ಕ ಹುಡುಗ, ಇನ್ನೂನೂವೇ ಪ್ರಾಥಮಿಕಶಾಲೆ ವಯಸ್ಸು.... ಇಲ್ಲಿ ಆಗ, ಸುಡುಗಾಡು ಸುಂಟಿ ಊರೂ ಇರಲಿಲ್ಲ, ಶಾಲೇನೂ ಇರಲಿಲ್ಲ, ಹೊಳೇಗೆ ಆಣೆಕಟ್ಟೇನೂ ಕಟ್ಟಿರಲಿಲ್ಲ. ನಮ್ಮ ಅಜ್ಜಿ ಸದಾಕಾಲಾನೂವೇ ಕತೆ ಹೇಳತಿದ್ರು — ಈ ಹಾಲಳ್ಳ ಉಂಟಲ್ಲ, ದುಗ್ಧವತೀ ನದೀ ಅಂತ ಇದರ ನಿಜವಾದ ಹೆಸರು, ಇದರ ತೀರದಲ್ಲಿನೇವೇಯೇ, ಹಾಗಂತಂದ್ರೆ ಈ ಕಡೆ ಅರ್ಧ ಹರದಾರಿಗೆ ಒಂದು ಕಾಡು ಉಂಟಲ್ಲಮ್ಮಾ ಅಲ್ಲಿ, ಸುಡುಗಾಡು ಸುಂಟಿ ಕಂಕಲ ರಾಕ್ಷಸ ಅಂತ, ಭಾರೀ ಅರಮನೆ ಕಟ್ಟಿಕೊಂಡು ವಾಸಮಾಡ್ತಾ ಇದಾನೆ, ಮನುಷ್ಯರು ಅಂಬಂಥೋರ ಕಣ್ಣಿಗೆ ಕಾಣಿಸೋದಿಲ್ಲ—ಅಂತ. ಹಂಗಂತ್ಹೇಳಿ, ನೋಡೇ ಬಿಡಬೇಕು ಅಂತಂದದ್ದೇನೇ ನೇ, ಒಂದು ದಿನ ಹೊರಟುಬಿಟ್ಟೆ. ಇನ್ನೂನೂವೇ ಚಿಕ್ಕ ಬಾಲಕ. ಕಾಡನ್ನೆಲ್ಲಾ ಸುತ್ತಿದೆ, ಸುತ್ತಿದೆ, ಸುತ್ತಿದೆ. ದಣಿವಾಯ್ತು. ಸುಡುಗಾಡು ಸುಂಟಿ ಒಂದು ಮರದ ಕೆಳಗೆ ಕೂತುಬಿಟ್ಟೆ.

ಸಾಯಂಕಾಲದ ಸಮಯ. ಬೆಟ್ಟದ ಕಡೆಯಿಂದ ಸೂರ್ಯನ ಕೆಂಗಿರಣಗಳು ತೂರಿ ಬರ್‍ತಾ ಇರೋ ಹಾಗೇನೇವೇಯೇ........ಆಹಾ, ಆಹಾ, ಆಹಾ, ಹಾಗಂತ್ಹೇಳಿ ಎಂಥಾ ಭಾರೀ ಅರಮನೆ ಅಂತಿಯೇ, ಅಪ್ಪಟ ಬಂಗಾರದ ಅರಮನೆ ಕಣ್ಣೆದುರಿಗೇನೇವೇಯೇ ಗೋಚರಿಸಿಬಿಡ್ತು. ಅದೇ ಕಂಕಲಾಸುರನ ಅರಮನೆ... ಹಾಗೇ ನೋಡನೋಡತಿದ್ದ ಹಾಗೇನೇವೇಯೇ ಮಾಯವಾಗಿಬಿಡ್ತು...ಈ ವಯಸ್ಸಲ್ಲಿ ಕೂಡಾನೂವೇ ನೆನಸ್ಕೊಂಡ್ರೆ—ಸುಡುಗಾಡುಸುಂಟಿ ನೆನ್ನೆ ಸಾಯಂಕಾಲ ನೋಡಿದೆನೋ ಅನ್ನೋ ಹಾಗೆ ಕಣ್ಣಿಗೆ ಕಟ್ಟುತ್ತೆ.

ಸಿಸ್ಟರ್ : (ಕೈಯಲ್ಲಿಯ ವಾಚ್ ನೋಡಿ) ಹೊತ್ತಾಯ್ತು ಸಾರ್...

ಮೇಷ್ಟ್ರು : ಕಥೇನೇನೇ ಸುರುಮಾಡಿಬಿಟ್ಟೆ ನಾನು. ಹಾಂ. ನಡಿ ಹೋಗೋಣ. ಹಾಗಂತಾದ್ರೂ ಕೂಡಾನೂನೂವೇ .... ಹೊತ್ತಾಗಿ ಬಿಡ್ತು ಅಲ್ಲವಾ ?... ಮುದುಕ ಆಗಿಬಿಟ್ಟೆ, ಸುಡುಗಾಡುಸುಂಟಿ......

ಇಬ್ಬರೂ ನಿಷ್ಕ್ರಮಿಸುತ್ತಾರೆ. ಹನುಮನಾಯಕನ ಪ್ರವೇಶ.

ಹನುಮ : ಎಲಾ ಮುದುಕ ಎಲಾ ಮುದುಕ !.... ಕಾಲಿನ ನೆಲಾ ಕಾಣೋದಿಲ್ಲ, ಚಂದ್ರನ ಮೊಲ ಕಾಣುತ್ತೆ ಅಂತಾನಲ್ಲ ! ಒಳ್ಳೇ ಮಲಾಮತಿ. ಇನ್ನೊಂದು ಕ್ಷಣ ಆಗಿದ್ರ ನಾನು ಅವನಿಗೆ ಕಂಡೇ ಬಿಡತಿದ್ದೆ. ಸದ್ಯ ಬಚಾವಾದೆ... (ಸುತ್ತನೋಡಿ)ಎಲ್ಲಾ ಹೋದರಯ್ಯಾ, ಯಾರೂ ಇಲ್ಲ. ನಿರಂಬಳ ಆಯ್ತು ....(ಪ್ರೇಕ್ಷಕರ ಕಡೆ ನೋಡಿ) ಈಗ, ನೀವು ಹೇಳಿರಯ್ಯಾ ನೋಡುವ, ನಾನು ಯಾರು ಅಂತ.... (ಬಟ್ಟೆಯೊಳಗೆ ಕೈತೂರಿ ಒಂದು ಕಿರು ಕನ್ನಡಿ ತೆಗೆದು ಮುಖ ನೋಡಿಕೊಂಡು).... ಅಲ್ಲ, ಒಂದ್ಸಲ ನಾನೇ ನೋಡಿಕಂಡೆ, ಮತ್ತೆ ನಾನೇ ಹೌದೋ ಅಲ್ಲವೋ ಅಂತ.... ಹೋಗಲಿ, ನನಗೆ ವಯೋಮಾನ ಏನು ಅಂತಾದರೂ ಹೇಳಿ ನೋಡುವ... ಯಾರು ಬೇಕಾದರೂ ಹೇಳಿರಯ್ಯಾ.... ಇನಾಮು.... ಗಾಳಿ ಕುದುರೇಗೆ ಗಡ್ಡದ ಲಗಾಮು, ಸರೀ ಹೇಳಿದ್ರೆ ಸವರನ್ ಇನಾಮು ! ಹೇಳಿ ನೋಡುವ ! .... ಸೋತಿರಾ, ಸೋತಿರಾ ?....ಹೋಗಲಿ ನಾವೇ ಹೇಳಿಬಿಡವ. ಕೇಳಿ—

ಮೂರರ ಹಿಂದೆ ಆರು, ಆರರ ಹಿಂದೆ ಮೂರು : ಮೊದಲು ಅರವತ ಮೂರು, ಆಮೇಲೆ ಮೂವತ್ತಾರು···· ಅಂದರೆ, ಆರುನೂರ ಮೂವತ್ತಾರು. ಸರೀ ಆರುನೂರಾ ಮೂವತ್ತಾರು ವರ್ಷ ವಯಸ್ಸು !.... ಆಂ ? ಅದ್ಯಾರಪ್ಪಾ ಅಲ್ಲಿ—ಹೌದೇನಲೇ ಹನುಮನಾಯಕ ಅಂತ ನಕ್ಕೋರು ?.. ಪರವಾ ಇಲ್ಲ. ವಯೋಮಾನ ತಿಳಿಯದಿದ್ದರೂ ನಾನು ಹನುಮನಾಯಕ ಅನ್ನೋದು ತಿಳೀತಲ್ಲ, ಇಲ್ಲಿ ಒಬ್ಬರಿಗಾದರೂ, ಆನಂದ ವಾಯ್ತಯ್ಯ. ಒಂದು ಇನಾಮು ಕೊಟ್ಬು ಬಿಡುವ ಅವರಿಗೆ. (ಬಟ್ಟೆ ತಡವಿ) ಓ ಇನಾಮು ತಂದೇ ಇಲ್ಲ. ಹೋಗಲಿ ಇಲ್ಲಿ ನನ್ನ ತನಕಾ ಬರೋದು ಉಳೀತು. ಅಲ್ಲೇ ನಿಮ್ಮ ಪಕ್ಕದವರ ಹತ್ತರ ಇಸಕೊಂಡು ಬಿಡಿ...ಓಹ್ಹೋಯ್, ಇವತ್ತಿನ ದಿವಸಕ್ಕೆ ಸರಿಯಾಗಿ ಆರುನೂರು ವತ್ಸರಗಳ ಹಿಂದೆ, ಆಗ ನನಗೆ ಮೂವತ್ತಾರು ವಯಸ್ಸು, ಒಂದು ಹೆಂಡತಿ ಒಂಬತ್ತು ಮಕ್ಕಳು, ಅವರನ್ನ ಊರಲ್ಲಿ ಬಿಟ್ಟು ನಾನು ಭಾಗವತರ ಆಟದ ಮೇಳ ಸೇರಿಕೊಂಡಿದ್ದೆ. ಅವತ್ತು ರಾತ್ರಿ ಆಟ ಮುಗಿಸಿ, ಮಾರನೇ ಬೆಳಿಗ್ಗೆ ಪಂಚ ಪಂಚ ಉಷಃಕಾಲದಲ್ಲಿ ಯಥಾ ರೂಢಿಯ ಪ್ರಕಾರ ಗಂಜಿಯನ್ನ ಭುಂಜಿಸಿ ಶಯನ ಹಾಕಿದೆವಯ್ಯಾ...ಏಳುವಾಗ ಸಂಜೆಯಾಗಿ ಬಿಟ್ಟಿತ್ತು. ಎಲ್ಲಾ ಎದ್ದು ಹೋಗಿ ಬಿಟ್ಟಿದ್ದರು. ಮುಂದಿನ ಮೊಕ್ಕಾಂ ಹೇಗೊ ಗೊತ್ತಿಲ್ಲ, ತೆರಳಿ ಬಿಡುವ ಅಂತ ಎದ್ದೆ. ಏಳುವಷ್ಟರಲ್ಲಿ ಏನು ಹೇಳು ವುದಯ್ಯಾ, ಆಕಾಶವನ್ನೇ ಕವಿದು ಬಿಟ್ಟಂಥಾ ಅಂತರ ಬೆಂತರ ಬಿರುಗಾಳಿ, ಅದರ ಹಿಂದಕ್ಕೇನೇ ಥೈ ಥೈ ಅಂತ ಕುಣಿತಾ ಬಂದು ಎದುರಿಗೇ ನಿಂತು ಬಿಡ್ತು ಒಂದು ಅಕರಾಳ ವಿಕರಾಳ ರೂಪ ! ನಾನಾದರೂ ಹೆದರಲಿಲ್ಲ, ಭಳಿರೇ ಪರಾಕ್ರಮಿ ಕಂಠೀರವ—ಅಂತ ಬಿರುದು ಹೇಳಿ ಪರಾಕು ಹಾಕಿ ಬಿಟ್ಟೆ. ಹಾಂ ಅಂತ ಅಬ್ಬರಿಸಿತು.......ನಂಗೆ ಇನ್ನೂ ರಾತ್ರಿ ಆಟದ್ದೇ ನೆನಪು—ಪರಾಕೇ, ಕಂಕಲಾಸುರರ ಕಡೆ ಹನುಮನಾಯಕ ಅಲ್ಲವೋ ನಾನು —ಅಂದೆ. ಸಮ ಸಮ ಸಮಾ—ಅಂತ ಗಹಗಹಿಸಿ ನಗತಾ ನನ್ನನ್ನ ಕಂಕುಳಲ್ಲಿ ಸಿಕ್ಕಿಸಿಕೊಂಡು ಹೊರಟೇಬಿಡಬೇಕಾ ?........ಅವತ್ತಿಂದಾ ಈ

ತನಕಾ ನಾನು ಕಂಕಲಾಸುರರ ಜತೇಲೇ ಇದ್ದಕಂಡು ಬಿಟ್ಟಿದ್ದೇನೆ. ಅವರಿಗೆ ಸಾವು ಅನ್ನೋದೇ ಇಲ್ಲ. ಹಾಗಾಗಿ ಅವರು ನನಗೂ ಸಾಯೋದಕ್ಕೆ ಬಿಡೋದಿಲ್ಲ.......ಇಲ್ಲೇ ಅವರ ವಸ್ತಿ. ಇಲ್ಲಿಂದ ಅರ್ಧ ಹರದಾರಿ ದೂರದ ಆ ಕಾಡು ಉಂಟಲ್ಲ—ಅಲ್ಲೇ ಅವರ ಅರಮನೆ.... ಹಾಗಂತ ನಾವು ಮನುಷ್ಯರ ಕಣ್ಣಿಗೆ ಕಾಣಲಿಕ್ಕಿಲ್ಲ. ಈ ಪ್ರಕಾರದಲ್ಲಿ ಮನುಷ್ಯ ಮಾತ್ರದವರ ಕಣ್ಣಿಗೆ ಕಾಣದೆ ಇರುವ ಹಾಗೆ ನಾವು ನಮ್ಮ ಕಂಕಲಾಸುರ ದಣಿಗಳ ಸಂಗತಿ ವಸ್ತಿಮಾಡಿಕೊಂಡು ಇರತಾ ಇರಲಾಗಿ, ಈಗ ಹತ್ತೋ ಇಪ್ಪತ್ತೋ ಮೂವತ್ತೋ ವರ್ಷಕ್ಕೆ ಹಿಂದೆ ಒಂದು ದಿನ, ದಣಿಗಳು ನಮ್ಮನ್ನು ಕರಸಿ, ಅಯ್ಯಾ ಹನುಮನಾಯಕ ನಮಗೆ ಬೇಸರವಾಗಿದೆ ಆಪ್ತರಾಗಿರತಕ್ಕಂಥಾ ನಮ್ಮ ಮಿತ್ರರಲ್ಲಿಗೆ ಭೇಟಿಕೊಟ್ಟು ಅಲ್ಲಿ ಕೆಲವು ದಿನ ಇದ್ದು ಬೇಸರ ಪರಿಹರಿಸಿಕೊಂಡು ಬರುವ—ಅಂದರು. ಸಮ ಮಹಾ ಸ್ವಾಮಿ—ಅಂದೆ, ಅಂಥಾ ಆಪ್ತರು ಯಾರಯ್ಯಾ ನಮಗೆ—ಅಂದರು. ತಮಗೆ ಗೊತ್ತು ದಣಿಗಳೇ —ಅಂದೆ. ಆಫ್ರಿಕಾ ದೇಶದಲ್ಲಿ ಲುಮುಂಬಾ ಅಂಥ ಒಂದು ಮಹಾನಗರವುಂಟು. ಅದಕ್ಕೆ ಅಧೀಶರಾಗಿರತಕ್ಕಂಥಾ ಉಮುಂಬಾಸುರರು ನಮ್ಮ ಆಪ್ತರು— ಅಂದರು. ತೆರಳಿಯೇ ಬಿಡುವ —ಅಂದೆ. ಅದೇ ಅವತ್ತು ಹೋದವರು ಇವತ್ತು ಮರಳಿದೆನಯ್ಯಾ ನಾನು. ನಮ್ಮ ದಣಿಗಳಾದರೂ ವಾರದಲ್ಲಿ ಬಂದಾರು, ಮಾಸದಲ್ಲಿ ಬಂದಾರು ........ಇಷ್ಟರಲ್ಲಿ ಇಲ್ಲಾದರೂ ಆಣೆಕಟ್ಟು ಊರು ಕಂಬ ತಂತಿ ಅಂತ ಏನೇನೋ ಬದಲಾವಣೆಗಳು ಆಗಿಹೋಗಿದ್ದಾವಯ್ಯಾ—ಗುರುತೇ ಸಿಕ್ಕ ಲಿಕ್ಕಿಲ್ಲ. ಇರಲಿ, ತಕ್ಷಣವೇ ನಮ್ಮ ಅರಮನೆಯ ಕಡೆ ತೆರಳಿ ಅಲ್ಲೇನಾಗಿದೆ ಅಂತ ನೋಡಬೇಕು, ತಡಮಾಡತಕ್ಕದ್ದಲ್ಲ........

ಹೊರಡಲು ಸಿದ್ಧನಾಗುವಾಗ ಪಾರ್ಶ್ವದಿಂದ ಗುಂಡಿನ ಸಪ್ಪಳ ಕೇಳುವುದು.

ಹನುಮ : ಇದೇನಯ್ಯಾ ಸದ್ದು, ನೋಡಿ ಬರತೇನೆ. (ಹೋಗಿ ನೋಡಿ ಹಿಂದಕ್ಕೆ ಬಂದು) ಹೋಯ್, ಕೈಯಲ್ಲಿ ಕೋವಿ ಹಿಡಿದ ಇಬ್ಬರು ಕಾವಲು ಭಟರು ಬರ್ತಾ ಇದ್ದಾರಯ್ಯಾ, ನಿಂತು ಪರಿಶೀಲನೆ ಮಾಡಿ ನೋಡಿದ್ದೇನೆ–

ಸ್ವಾರಸ್ಯವುಂಟಯ್ಯಾ ಸ್ವಾರಸ್ಯವುಂಟು—ಮಾತಾಡಲಿಕ್ಕೆ ಭಾಷೆಯೇ ಬರುವುದಿಲ್ಲ, ಅವರಿಗೆ. ಹಾಗಂತ ನಮ್ಮ ದಣಿಗಳಿದ್ದಾರಲ್ಲ, ಮುಂಗಾಲಿಟ್ಟು ಬರುವ ವೈರಿಯನ್ನು ಕಂಗಾಲು ಮಾಡಿಕಳಿಸುವ ರುಂಡಮುಂಡ ಗಂಡಭೇರುಂಡ ಅಂತ ಬಿರುದು ಹೊತ್ತಂಥಾ ನಮ್ಮ ದಣಿ ಕಂಕಲಾಸುರರೂ ಮಾತು ಅಂತೆ ಆಡಲಿಕ್ಕಿಲ್ಲ : ಯಾಕೆಂದರೆ ಅವರಿಗೆ ಮಾತೇ ಬರೋದಿಲ್ಲ. ಏನು ಹೇಳುವುದಿದ್ದರೂ ಅವರು ಕುಣಿದೇ ತೋರಿಸಿ ಬಿಡುವವರು........ಇಕೊಳ್ಳಿ, ಕೋವಿಹೊತ್ತ ಈ ಕಾವಲು ಭಟರಿದ್ದಾರಲ್ಲಾ, ಮೆಚ್ಚಿದೆ ಮೆಚ್ಚಿದೆ—ಇಂಥವರು ಸಂತೆಯಲ್ಲಿ ಸಿಕ್ಕಲಿಕ್ಕಿಲ್ಲ; ಸಾಗರದಲ್ಲಿ ಸಿಕ್ಕಲಿಕ್ಕಿಲ್ಲ—ಗಾಳಿಯಲ್ಲಿ ಗುಂಡು ಹಾರಿಸಿಕೊಂಡೇ ಮಾತಾಡ್ತಾರಲ್ಲಯ್ಯಾ.......

ಕೋವಿಹೊತ್ತ ಇಬ್ಬರು ಪೋಲೀಸರ ಪ್ರವೇಶ. ಒಬ್ಬ ಕೋವಿಯೆತ್ತಿ ಗಾಳಿಯಲ್ಲಿ ಒಂದು ಗುಂಡು ಹಾರಿಸುತ್ತಾನೆ. ಅದಕ್ಕೆ ಉತ್ತರವಾಗಿ ಇನ್ನೊಬ್ಬ ಮೂರು ಗುಂಡು ಹಾರಿಸುತ್ತಾನೆ.

ಹನುಮ : ತಿಳೀತಯ್ಯಾ ತಿಳೀತು......ಒಬ್ಬ ಗುಂಡು ಹಾರಿಸಿ ಕೇಳ್ತಾನೆ ಎಲ್ಲಿ—ಅಂತ. ಅದಕ್ಕೆ ಇನ್ನೊಬ್ಬ ಗುಂಡುಹಾರಿಸಿ ಉತ್ತರ ಕೊಡ್ತಾನೆ, ಇಲ್ಲೀ, ನೀನಿಲ್ಲಿ ನಾನಿಲ್ಲಿ—ಅಂತ.

ಇಬ್ಬರೂ ಪೋಲೀಸರು ಆಚೆಈಚೆ ಪಾರ್ಶ್ವಗಳಲ್ಲಿ ಪಹರೆ ನಿಲ್ಲುತ್ತಾರೆ. ಅಷ್ಟರಲ್ಲಿ, ಹಿನ್ನೆಲೆಯಲ್ಲಿ ಆಡುತ್ತಿರುವ ಹುಡುಗರೆಲ್ಲ ಗುಂಡಿನ ಸಪ್ಪಳ ಕೇಳಿದ್ದರಿಂದ ಗುಂಪಾಗಿ ಈ ಕಡೆಗೇ ಬರುತ್ತಾರೆ.

ಎಲ್ಲರೂ : ಪೋಲಿಸಿನೋರು, ಪೋಲೀಸಿನೋರು !

ಬಂಟು : ಇಲ್ಲಿ ಕಾವಲು ಕಾಯೋಕೆ ಬಂದರು ಅಂತ ಕಾಣುತ್ತೆ,

ಮೀನಿ : ನಾಳೆಯಿಂದ ನಾವು ಇಲ್ಲಿ ಆಟಕ್ಕೆ ಬರೋ ಹಾಗೆ ಇಲ್ಲ.

ಬಂಟು : ಎಲ್ಲಿಗೆ ಹೋಗೋದಪ್ಪಾ ನಾಳೆಯಿಂದ ಆಟಕ್ಕೆ ?

ಜೇನಿ : (ಹನುಮನನ್ನು ಕಂಡು) ಇಲ್ನೋಡಿ, ಇವರ್‍ಯಾರೋ ಹೊಸಬರು.

ಪಮ್ಮಿ : ಹೌದಲ್ಲ, ಯಾರೋ ಹೊಸಬರು.

ಕಾಮು : ಅರೆ, ಯಾರು ಇದು !ನಾವು ನೊಡೇ ಇಲ್ಲ.

ಮಿಟ್ಟಿ : ನಮ್ಮ ಊರಿನೋರು ಅಲ್ಲಾ.

ಬಾಳ : ಏಯ್, ಎಷ್ಟು ಚಂದ ಇದಾರೆ ನೋಡಿ.

ಶೋನಿ : ಅವರ ಬಟ್ಟೆ ಎಷ್ಟು ಚಂದ ಉಂಟು ನೋಡಿ.

ಹನುಮ — ಈಗ ನೃತ್ಯಗತಿಯಲ್ಲಿ ಅಲ್ಲಲ್ಲಿ ಅಡಗಿಕೊಳ್ಳಲು ಯತ್ನಿಸುತ್ತ ಚಲಿಸುತ್ತಿದ್ದಾನೆ.

ಜಟ್ಟಿ : ಏಯ್, ಏಯ್, ಎಷ್ಟು ಚಂದ ಕುಣೀತಾರೆ, ನೋಡಿ.

ಬಂಟು : ಅಂಕಲ್, ಅಂಕಲ್......

ಶುಗ್ಗಿ : ಮಾಮಾ, ಮಾಮಾ......

ಹನುಮ ಮೆಲ್ಲಗೆ ಅಲ್ಲಿಂದ ಜಾರಿಕೊಂಡು ನಿಷ್ಕ್ರಮಿಸುತ್ತಾನೆ. ಹುಡುಗರು ಅವನ ಬೆನ್ನು ಹತ್ತುತ್ತಾರೆ.

ಚಾಕು : ಹೋಗಿಬಿಟ್ಟರಲ್ಲ......

ಚೇರ : ಹೋಗೇಬಿಟ್ಟರಲ್ಲ.......

ಬಾಳ : ಏ ಬನ್ನಿ ಬನ್ನಿ, ಹಿಂದೇಹೊಗೋಣ, ಮಾತಾಡಿಸೋಣ.

ತಂಪ : ನಡೀರಿ, ಹೋಗೋಣ.

ಎಲ್ಲಾ ಹುಡುಗರೂ ಆತನ ಹಿಂದೆ ಧಾವಿಸುತ್ತಾರೆ. ಆಮೇಲೆ ಮತ್ತೊಂದು ಕಡೆಯಿಂದ ಹನುಮ ಪ್ರವೇಶಿಸುತ್ತಾನೆ.

ಹನುಮ : ಒಳ್ಳೇ ಮಲಾಮತಿ ಮಾರಾಯ್ರೆ....ಮಕ್ಕಳ ವ್ಯಾಳ ಮಂಗನ ತಾಳ ! ಇವು ಬೆನ್ನು ಹತ್ತಿಯೇ ಬಿಟ್ಟೆವು...ಎಲಾ ಶಿವನೇ, ಇವಕ್ಕೆ ನಾನು ಹ್ಯಾಗೆ ಕಂಡೆ ಅಂತ....ಒರಳುಕಲ್ಲು ಈಶ್ವರದೇವರ ವರವೇ ಸುಳ್ಳಾಯಿತ ?.... (ಯೋಚಿಸಿ) ಹಾಗಲವಯ್ಯಾ ಹಾಗಲ್ಲ. ಗಂಡುಗಳಿಗೆ ಕಾಣಲಿಕ್ಕಿಲ್ಲ, ಹೆಣ್ಣುಗಳಿಗೆ ಕಾಣಲಿಕ್ಕಿಲ್ಲ ಅಂತ ದೇವರು ವರ ಕೊಟ್ಟಿದ್ದಲ್ಲವೊ ? ಈ ಮಧ್ಯೆ ಹುಡುಗರು ಮುದಕರು ಹೊರಗೇ ಉಳಿದುಬಿಟ್ಟರು. ಇರಲಿ. ಇವಾದರೂ ಈಗ ನನ್ನನ್ನು ಬಿಡಲಿಕ್ಕಿಲ್ಲ ಅರಮನೆ ತನಕವೂ ಬೆನ್ನು ಹತ್ತುತಾವೆ.... ಹೀಗೆ ಮಾಡ್ತೇನಯ್ಯಾ, ಅವಕ್ಕೆ ಮಂಕುಬೂದಿ ಚೆಲ್ಲಿ ಕಣ್ಣಿಗೆ ಭ್ರಮೆ ಅಡರುವ ಹಾಗೆ ಮಾಡ್ತೇನೆ...ತಕ್ಕಲಕಾರಿ ತಿರ ಮುರೆಗು ಹಾದಿ, ಮಕ್ಕಳ ಕಣ್ಣಿಗೆ ಮಂಕು ಬೂದಿ....

ಹಿಂತಿರುಗಿ ಕೈಯಾಡಿಸಿ ನಿಷ್ಕ್ರಮಿಸುತ್ತಾನೆ. ಹುಡುಗರು ಓಡುತ್ತ ಬರುತ್ತಾರೆ.

ಚೇರ : ಎಲ್ಲೋ ಹೋಗೇ ಬಿಟ್ಟರಲ್ಲ ಹೊಸಾ ಅಂಕಲ್....

ಚೆನ್ನ : ಹೋಗೇ ಬಿಟ್ಟರಲ್ಲ........

ಕಾಮು : ಈ ಕಡೇನೇ ಬಂದ್ರು.......

ಬಾಳ : ಹೌದ್ಹಾದು ಈ ಕಡೇನೇ ಬಂದ್ರು........

ತಂಪ : ನನ್ನ ಕಣ್ಣಿಗೆ ಏನೋ ಆಗಿ ಬಿಡ್ತಪ್ಪ
....ಮಂಕು ಮಂಕು.

ಚೇರ : ನಂಗೂ ಹಾಗೇ.......

ಬಾನಿ : ನಂಗೂ ಒಂಥರಾ ಆಗಿಬಿಟ್ಟದೆ...ಕಣ್ಣೇ ಸರೀ ಕಾಣೋಲ್ಲ.

ಹುಡುಗರು : ನಮಗೂ ಹಾಗೇ.......

ಹುಡ್ಗೀರು : ನಮಗೂ ಹಾಗೇ...

ನಿಮ್ಮಿ : ಈಗ ನಾವು ಊರು ಬಿಟ್ಟು ಸುಮಾರು ಎರಡು ಕಿಲೋಮೀಟರ್ ಬಂದಿಲ್ವಾ ?

ಚೇರ : ಎರಡೇನು ಜಾಸ್ತಿನೇ ಬಂದ್ವಿ.

ಬಂಟು : (ಹಿನ್ನಲೆಗೆ ತಿರುಗಿ ನೋಡಿ) ಅರೆ, ಇದೇನಿದು, ಇಲ್ಲಿ ಮತ್ತೆ ಡ್ಯಾಮೇ ಕಾಣುತ್ತಲ್ಲಾ ?

ಬಿಂಕು : ಅಲ್ಲಿಂದ ಇಷ್ಟು ದೂರ ನಡಕೊಂಡು ಬಂದಿದೀವಿ, ಇಲ್ಲಿ ಹ್ಯಾಗೆ ಕಾಣುತ್ತೆ ಡ್ಯಾಮು ?......(ನೋಡಿ) ಅರೆ, ಹೌದಲ್ಲ........

ಪಮ್ಮಿ : ಡ್ಯಾಮ್ ಸೈಟಿಗೇ ಬಂದ್ಬಿಟ್ಟಿದೇವೆ !.......

ನಿಮ್ಮಿ : ಅದು ಹ್ಯಾಗೆ ಬಂದೆವು ?

ಜೇನಿ : (ನೋಡಿ, ಮೆಲ್ಲಗೆ ಆ ಕಡೆ ನಡೆಯುತ್ತ) ಏಯ್, ಸರಿಯಾಗಿನೋಡಿ. ಡ್ಯಾಮ್ ಸೈಟ್ ಅಲ್ಲ...ಬದಲಾಗ್ತಾ ಇದೆ...
ಹಿನ್ನಲೆಯಲ್ಲಿ ಈಗ ನಿಧಾನವಾಗಿ ಡ್ಯಾಮ್ ಸೈಟ್ ದೃಶ್ಯವನ್ನು ಅರಮನೆ ದೃಶ್ಯವಾಗಿ ಪರಿವರ್ತಿಸಲಾಗುತ್ತಿದೆ.

ಕೇಳು : ಯಾಕೋ ನನ್ನ ಕಣ್ಣಿಗೆ ಮಂಕು ಮಂಕಪ್ಪಾ....ಹೌದು....

ಬಂಟು : ಏಯ್, ಹೌದು, ಭಾರೀ ಅರಮನೆ ಹಾಗೇ ಕಾಣುತ್ತೆ.

ಮೀನಿ : ಮೊನ್ನೆ ನಮ್ಮ ಮೇಡಮ್ ಅದ್ಯಾವುದೋ 'ಕ್ಯಾಸಲ್' ಅಂತ ಒಂದು ಚಿತ್ರ ತೋರಿಸಲಿಲ್ವಾ, ಹಾಗೇ ಕಾಣ್ತದೆ.

ಹುಡ್ಗೇರು : ಹೌದು, ಹೌದು.

ದೃಶ್ಯ ಬದಲಾವಣೆ ಪೂರ್ತಿಯಾಗಿ, ಈಗ ಎತ್ತರದ ಕಲ್ಲು ಗೋಡೆಗಳ ಭಾರೀ ಕಟ್ಟಡ ಎದುರು ಕಾಣುತ್ತಿದೆ. ಹುಡುಗರೆಲ್ಲ ಆ ಕಡೆ ಧಾವಿಸುತ್ತಾರೆ ; ಗೋಡೆ ಕಂಬಗಳನ್ನು ಪರಿಶೀಲಿಸತೊಡಗುತ್ತಾರೆ.

ಬಾಳ : ಕಲ್ಲು ಬಂಡೇನೇ ತಂದು ಕಟ್ಟಿದ ಹಾಗಿದೆ ಅಲ್ವಾ ?

ಚೆನ್ನ : ಈ ಕಂಬಗಳನ್ನು ನೋಡು.

ತಂಪ : ಆನೆಗಳನ್ನ ಕಟ್ಟಿಹಾಕಬಹುದು.

ಮೀನಿ : ಕಿಟಕಿಗಳೇ ಕಾಣೋದಿಲ್ಲಲ್ಲ ಈ ಅರಮನೇಗೇ.

ಮಿಟ್ಟಿ : ಒಂದೇ ಒಂದು ಬಾಗಿಲು ಅಂತ ಕಾಣುತ್ತೆ, ಬೇರೆ ಬಾಗಿಲೇ ಕಾಣಿಸೋದಿಲ್ಲ.

ಸೋನಿ : ಒಳಗೆ ಯಾರೂ ಇಲ್ವೇ ಇಲ್ವಾ ?

ಬಂಟು : ಇಲ್ಲಿ ಸುತ್ತಾ ಎಲ್ಲಾ ನೋಡಿದ್ರೆ ನಮ್ಮ ಡಾಮ್ ಸೈಟ್ ಇದ್ದ ಹಾಗೇ ಇದೆ ಅಲ್ವಾ ?

ಬಿಂಕು : ನಾವು ಇನ್ನು ಆಡೋದಕ್ಕೆ ಇಲ್ಲೇ ಬರಬಹ್ದು.

ಕೆಲವರು : ಹೌದು, ಹೌದು, ಇಲ್ಲೇ ಬರೋಣ.

ಕೇಳು : ದೊಡ್ಡ ಅಂಗಳ ಇದೆ.

ಮ. ಕೆಲ : ಇಲ್ಲೇ ಬರೋಣ.

ಕಾಮು : ಅಂಕಲ್ ಇಲ್ಲೇ ಬಂದ್ರು ಅಲ್ವಾ ?

ಕೇಳು : ಎಲ್ಲೋ ಹೋಗೇ ಬಿಟ್ರು.

ಚಾಕು : ಈ ಅರಮನೆ ಒಳಗೇ ಹೋದರೋ ಏನೋ.

ನಿಮ್ಮಿ : ಒಳಗಡೆ ಏನೂ ಕಾಣಿಸೋದೇ ಇಲ್ಲಲ್ಲ.

ಬಾಳ : ಅಂಕಲ್ ಹೋದ್ರು, ನಮಗೆ ಅರಮನೆ ಸಿಗ್ತು.

ಚೆನ್ನ : ನಮಗೆ ಅಂಕಲ್ಲೂ ಬೇಕು.

ಹನುಮ ಮೆಲ್ಲನೆ ಪ್ರವೇಶಿಸುತ್ತಾನೆ.

ಹನುಮ : ಒಳ್ಳೇ ಗಂಟು ಬಿದ್ದವಲ್ಲ ಮಾರಾಯ್ರೆ....

ಹುಡುಗರು : (ಕೆಲವರು) ಅಂಕಲ್ ಬಂದರು, ಅಂಕಲ್ ಬಂದರು.

(ಇನ್ನು ಕೆಲವರು) ಅಂಕಲ್ ಸಿಕ್ಕರು.

ಹನುಮ : (ಹುಡುಗರು ತನ್ನ ಕಡೆ ಬರುತ್ತಿರಲು ತಾನೂ ಅವರನ್ನು ಸಮೀಪಿಸಿ ಭಾಗವತರ ಹಾಡಿನ ಧಾಟಿಯಲ್ಲಿ—)ಎಲವೋ ಪೋರರೆ ಕೇಳಿ ಕೇಳಿ... (ಅಷ್ಟರಲ್ಲಿ ಮುಂಡಾಸು ಬಿಚ್ಚುತ್ತಿರಲು) ಪೇಟ ಬಿಚ್ಚಿತು ಸ್ವಲ್ಪ ತಾಳಿ.... (ಪೇಟ ಸುತ್ತಿಕೊಂಡು)ಎಲವೋ ಪೋರರೇ ಕೇಳಿ ಕೇಳಿ, ಯಾಕೆ ಬಂದಿರಿ ಇಲ್ಲಿ ಹೇಳಿ, ಈಗ—ಯಾತಕ್ಕೆ ಬಂದದ್ದು ಹೇಳಿ...

ಹುಡುಗರೆಲ್ಲಾ ಖುಷಿಯಿಂದ ಚಪ್ಪಾಳೆ ತಟ್ಟುತ್ತಾರೆ.

ಬಾಳ : ಅಂಕಲ್ ಸಂಗೀತದಲ್ಲೇ ಮಾತಾಡ್ತಾರೆ!

ಹುಡುಗರು : (ಕೆಲವರು) ಜಿಂದಾಬಾದ್ ಜಿಂದಾಬಾದ್
(ಇನ್ನು ಕೆಲವರು) ಹೊಸ ಅಂಕಲ್ ಜಿಂದಾಬಾದ್

ಬಂಟು : ಇನ್ನೊಂದು ಹಾಡು ಹೇಳಿ, ಅಂಕಲ್.

ಜೇನಿ : ಹೇಳಿ, ಅಂಕಲ್.

ಎಲ್ಲರೂ : ಹೇಳಿ ಅಂಕಲ್, ಹೇಳಿ ಅಂಕಲ್.

ಹನುಮ : ಎಲಾ ಎಲಾ ಧೂರ್ತ ಬಾಲಕರಿರ, ತಟ್ಟನೆ ಕೇಳುವಂಥಾ ಪ್ರಶ್ನೆಗೆ ಚಟ್ಟಂತ ಉತ್ತರ ಕೊಡತಕ್ಕದ್ದು ಬಲ್ಲಿರಾ? ಈಗ ಹೇಳಿಕೊಳ್ಳಿ— ನೀವೆಲ್ಲಾ ಯಾರು, ಯಾತಕ್ಕೋಸ್ಕರವಾಗಿ ಇಲ್ಲಿಗೆ ಬಂದಿದ್ದೀರಿ?

ನಿಮ್ಮಿ : ಹ್ಯಾಗೆ ಮಾತಾಡ್ತಾರೆ ನೋಡು—

ಪಮ್ಮಿ : ನಮ್ಮ ಕನ್ನಡ ಮೇಷ್ಟ್ರು ಪಾಠ ಮಾಡೋ ಹಾಗೆ.

ಬಂಟು : ಗೊತ್ತಿಲ್ವಾ ಅಂಕಲ್, ನಾವೆಲ್ಲಾ ಹಾಲು ಹಳ್ಳ ಕಾಲೋನಿಯವರು.

ಮೀನಿ : ಅಲ್ಲಿ ಡ್ಯಾಮ್ ನೋಡಿದರಲ್ಲಾ, ಅಲ್ಲೇ ಹಾಲಳ್ಳ ಕಾಲೋನಿ ಅಂತ.

ಬಿಂಕು : ಎಚ್. ಎಚ್. ಕಾಲೋನಿ ಅನ್ನೋಲ್ವಾ-ಅದೇನೇ,

ಮಿಟ್ಟಿ : ನಾವೆಲ್ಲಾ ಸ್ಕೂಲು ಹುಡುಗರು.

ಕಾಮು : ಅಪ್ಪರ್ ಪ್ರೈಮರಿ ಸ್ಕೂಲಿದೆ ನೋಡಿ, ಅಲ್ಲೀ ಹುಡುಗರು.

ಕೇಳು : ಗೊತ್ತಿಲ್ವಾ ನಿಮಗೆ? R.N.S ಅಂತ ಮೇಷ್ಟ್ರು ಇದಾರಲ್ಲ.

ಸೋನಿ : ಲಿಲಿಯಾ ಅಂತ ಗುಂಗುರು ಕೂದಲು ಮೇಡಮ್ ಇದಾರಲ್ಲ....

ಹನುಮ : ಏಯ್ ನಿಲ್ಲಿಸ್ರೋ, ನಿಲ್ಲಿಸ್ರೊ, ನಿಲ್ಲಿಸ್ರೋ. ಹಾಗೆ ಗುಬ್ಬಿಗಳ ಹಾಗೆ ಚೀಂ ಚೀಂ ಚೀಂ ಗುಟ್ಟಿ, ನನ್ನ ತಲೆ ಕೆಡಿಸಿಬಿಡ್ತೀರಿ ಅಷ್ಟೆ...ಇಲ್ಲಿ ಯಾಕೆ

ಬಂದಿರಿ ?

ಚೆನ್ನ : ನೀವು ಬಂದ್ರಲ್ಲಾ, ನಾವೂ ಬಂದೆವು.

ಚಾಕು : ನಿಮ್ಮ ಜೊತೆ ಮಾತಾಡೋಣ ಅಂತ ಬಂದೆವು.

ಹನುಮ : ನಿಲ್ಸಿ !... ನಾ ಹೇಳೋದು ಕೇಳಿ. ನೀವು ಇಲ್ಲಿ ಬರಕೂಡದು, ಬರಲೇ ಕೂಡದು. ಇದು ಯಾರ ಅರಮನೆ ಗೊತ್ತಾ ? ಇದು ಯಾರ ತೋಟ ಗೊತ್ತಾ ?

ಎಲ್ಲರೂ : ಗೊತ್ತಿಲ್ಲ, ಗೊತ್ತಿಲ್ಲ....ಹೇಳಿ, ಹೇಳಿ...

ಹನುಮ : ಇದು ಅಂಥಿಂಥಾ ಜಾಗವಲ್ಲ. ಅಂತರ ಬೆಂತರದಲ್ಲಿ ಮಂತ್ರಹಾಕಿ ತಂತ್ರಾ ಕಟ್ಟಿದ್ದು !

ಜೇನಿ : (ಆಶ್ಚರ್ಯದಿಂದ) ಅಂತರ ಬೆಂತರದಲ್ಲಿ ಮಂತ್ರಾ ಹಾಕಿ ತಂತ್ರಾ ಕಟ್ಟಿದ್ದು!

ಹಲವರು : ತಂತ್ರಾಕಟ್ಟಿದ್ದು !

ಹನುಮ : ಥತ್ತೇರಿ. ಚುಪ್ ಅಂದ್ರೆ ಚುಪ್ !...ಇದು ರಾಕ್ಷಸರ ಅರಮನೆ. ಕಂಕಲಾಸುರರು ಅಂತ, ಪ್ರಚಂಡ ದೈತ್ಯರು, ಮಹಾರಾಕ್ಷಸರು, ಇದು, ಅವರ ಅರಮನೆ ; ಇದು ಅವರ ತೋಟ.

ಕೇಳು : ರಾಕ್ಷಸರು ಅಂದ್ರೆ ?

ಸೋಂಪ : ರಾಕ್ಷಸ ! ಆಟದಲ್ಲಿ ಬರೋಲ್ವೇನೋ, ಇಂಥಿಂಥಾ ದೇಹ, ಇಷ್ಟಿಷ್ಟಗಲಾ ಮುಖಾ, ಕೋರೇ ದಾಡೇ, ಜೋಲೋ ನಾಲಗೆ, ಬೆಂಕೀ ಕಣ್ಣು....

ಚಾಕು : ಇಪ್ಪತ್ತಿಪ್ಪತ್ತು ಕೈ. ಎಲೆಕ್ಟ್ರಿಕ್ ಸ್ಟ್ರಕ್ಚರ್ ಇರೋಲ್ವಾ, ಹಾಗಪ್ಪ...

ಬಂಟು : ಟೀಚರ್ ಕಥೆ ಹೇಳಿರಲಿಲ್ವೇನ್ರೋ SELFISH GIANT ಅನ್ನೋ ರಾಕ್ಷಸನ ಕಥೆ....

ಚಿಂಕು : ಓ ! ರಾಕ್ಷಸ ಅಂದರೆ ಜಯಂಟ್ ಅಂತಲಾ ?........

ಚೇಲ : ಅಂಕಲ್, ಜಯಂಟ್ ಇಲ್ಲೇ ಇರ್ತಾರಾ ?

ಕಾಮು : ಅರಮನೇ ಒಳಗೆ ಇರ್ತಾರಾ ?

ಬಾಳಾ : ಇದಾರಾ ಈಗ ?

ಚೆನ್ನ : ಇಲ್ವಾ ?

ಹನುಮ : ಥತ್ ನಿಮ್ಮ, ಚೀಂ ಚೀಂ ಚೀಂ ಅಂತ ನನ್ನ ತಲೆ ಚಿಟ್ಟು ಹಿಡಿಸಿ ಬಿಡ್ತೀರಿ!

ಸುಗ್ಗಿ : ಸಿಟ್ಟು ಬಂತಾ ಅಂಕಲ್ ?...

ಹನುಮ : (ತಟ್ಟನೆ ಬದಲಾಗಿ) ಅಲ್ಲ ಅಲ್ಲ, ರಾಕ್ಷಸರು ಈಗ ಊರಲಿಲ್ಲ. ಸ್ನೇಹಿತರನ್ನ ನೋಡೋಕೆ ದೂರದೇಶಕ್ಕೆ ಹೋಗಿದಾರೆ. ಹದಿನೈದು ದಿನದಲ್ಲಿ ಬರ್ತಾರೆ.

ತಂಪ : ಅವರು ಬಂದ್ರೆ ತುಂಬಾ ಚೆನ್ನಾಗಿರುತ್ತೆ.

ಹಲವರು : ಹೌದು ಹೌದು, ತುಂಬಾ ಚೆನ್ನಾಗಿರುತ್ತೆ.

ಹನುಮ : ಹಂ, ಆಯ್ತುಲ್ಲವೋ, ನಡೆದು ಬಿಡಿ ಈಗ.

ಹಿನ್ನಲೆಯಲ್ಲಿ ಸೈರನ್ ಕೂಗುವ ಸದ್ದು.

ಸುಮ್ಮಿ : ಓ, ಸೈರನ್.

ಜೆಸ್ಸಿ : ನಡೀರಿ, ನಡೀರಿ, ಹೊತ್ತಾಗುತ್ತೆ ಇನ್ನು.

ಬಂಟು : ಅಂಕಲ್, ಇನ್ನು ದಿನಾ ಸಂಜೆ ನಾವೆಲ್ಲಾ ಇಲ್ಲಿಗೇ ಆಟಕ್ಕೆ ಬರ್ತೇವೆ.

ಕಾಮು : ಸಂಜೆ ಹೊತ್ತು ಆಟ ಆಡ್ಕೊಂಡು, ಹೀಗೆ ಸೈರನ್ ಕೂಗುತ್ತಲ್ಲಾ, ಆಗ ವಾಪಸ್ಸು ಹೋಗಿಬಿಡ್ತೇವೆ.

ಕೇಳು : ಆಮೇಲೆ (ಹಳ್ಳಿ ಹುಡುಗರ ಕಡೆ ತೋರಿಸಿ) ಇವರಿಗೆಲ್ಲ ಕಾಲೋನಿ ದಾಟಿ ಆಚೆ ಹಳ್ಳೀಗೆ ಹೋಗಬೇಕು. ಹೊತ್ತಾಗಿ ಬಿಡುತ್ತೆ.

ಮೀನಿ : ಬರ್ತೀವಿ, ಅಂಕಲ್.

ಮಿಟ್ಟಿ : ಬರ್ತೀವಿ.

ಸೋನಿ : ನಿಮ್ಮ ಹೆಸರು ಏನೂ ಅಂತ ಹೇಳೇ ಇಲ್ವಲ್ಲಾ ಅಂಕಲ್,

ಜೇನಿ : (ಅವನ ಕೈ ಹಿಡಿದು) ಹೇಳಿ· ಅಂಕಲ್, ನಿಮ್ಮ ಹೆಸರು ಹೇಳಿ.

ಹನುಮ : ಊರು ಹೆಸರು ಕಾಳು, ಹೆಸರು ಉದ್ದಿನ ಕಾಳು.

ಜೇನಿ : ತಮಾಷೆ ಮಾಡ್ತೀರಿ. ಸರಿಯಾಗಿ ಹೇಳಿ ಅಂಕಲ್.

ಹನುಮ : ಪುರುಸೊತ್ತಿದ್ದೋರು ಹನುಮನಾಯಕ ಅಂತಾರೆ. ಆತುರವಿದ್ದೋರು ಹನುಮ ಅಂತಾರೆ.

ಬಂಟು : ಅಂಕಲ್ ಹನುಮಾ ! ಅಂಕಲ್ ಹನುಮಾ !

ಕಾಮು : ಹನ್ನು ಅಂಕಲ್, ಹನ್ನೂ ಅಂಕಲ್ !

ಎಲ್ಲರೂ : ಹನ್ಮೂ ಅಂಕಲ್. ಹನುಮಾ ಅಂಕಲ್ !

ಮೀನಿ : ಬರ್‍ತೀವಿ ಹನುಮಾ ಅಂಕಲ್.

ಎಲ್ಲರೂ : ಬರ್‍ತೀವಿ ಹನುಮಾ ಅಂಕಲ್. ಬರ್‍ತೀವಿ ಅಂಕಲ್, ಟಾ ಟಾ....
ಎನ್ನುತ್ತಾ ಹೊರಡುತ್ತಾರೆ.
ಓಡುತ್ತ ಹೋಗುವ ಹುಡುಗರು ಘೋಷಣೆ ಕೂಗುತ್ತ ಹೋಗುವುದು ಕೇಳುತ್ತದೆ : ಜಿಂದಾಬಾದ್ ಜಿಂದಾಬಾದ್ ! ಹನ್ಮೂ ಅಂಕಲ್ ಜಿಂದಾಬಾದ್ ! ಅಂಕಲ್ ದೈತ್ಯ ಜಿಂದಾಬಾದ್....

ಹನುಮ : (ಅವರನ್ನೇ ನೋಡುತ್ತ) ಮಕ್ಕಳ ಮ್ಯಾಳ–ಮಂಗನ ತಾಳ !....
ಅರಮನೆ ಕಡೆ ತಿರುಗಿ ನಡೆಯುವನು.

*     *     *     *     *

ಸ್ವಲ್ಪ ಹೊತ್ತಾದ ಮೇಲೆ ಹನುಮನಾಯಕನ ಪ್ರವೇಶ

ಹನುಮ : ಮಕ್ಕಳ ಮ್ಯಾಳ ಮಂಗದ ತಾಳ !....ಅಲ್ಲಲ್ಲ ; ಹಕ್ಕೀ ಮ್ಯಾಳ ಹನುಮನ ತಾಳ !.... ಹಾಗೇ ಆಗಿ ಹೋಯಿತಲ್ಲಯ್ಯಾ !... ಗಂಟು ಬಿದ್ದೇಬಿಟ್ಟವು. ಒಂದೆರಡು ಅಲ್ಲ, ಹತ್ತು ದಿನ ಆಯ್ತಲ್ಲ. ದಿನಾ ಸಂಜೆ ಅವು ಹಾಜರ್, ಆಟಕ್ಕೆ...ಅಲ್ಲ, ನಾ ಎಂಥ ಮಂಗ ಮಾರಾಯರೆ, ಅವುಗಳ ಜತೆ ನಾನೂ ಆಟಕ್ಕೆ ತೊಡಗುವುದಾ ?....ಅಲ್ಲ, ಹೊಯ್, ಇನ್ನೊಂದು ಸಂಗ್ತಿ... ಏನೋ ಪರಿಮಳವಪ್ಪಾ...ಬರೀ ಮೂಗಿಗೆ ಅಂತಲ್ಲ, ಮೈಗೆಲ್ಲಾ, ರೋಮರೋಮಕ್ಕೆಲ್ಲಾ ಮುಟ್ಟೋ ಪರಿಮಳ.... ಮೊದಲು ಇಲ್ಲಿ ಮುನ್ನೂರ ಅರವತ್ತು ಕಾಲವು ಅದೇನೋ ನಾತವಪ್ಪ...ನಮ್ಮ ಕಂಕಲಾಸುರರು ಕೂಡ, ವರ್ಷದಲ್ಲಿ ನಾಕುದಿನ, ಮೂಗು ಸ್ವಚ್ಛವಿದ್ದಾಗ, ಏನೋ ನಾತ ನಾತ ಅಂತ ಅಬ್ಬರಿಸುತ್ತಿದ್ದರು.... ಈಗ ಅದು ಹೋಗಿ ಎಂಥದೋ ಲಾಲೀ ಬಾಲೀ ಆಕಾಶ ನೀಲಿ ಪರಿಮಳವಪ್ಪ.... ಅಕಾ, ಬಂದವಲ್ಲ, ಹನುಮನಾಯ್ಕನ ದಂಡು !....
ಮಕ್ಕಳ ಪ್ರವೇಶ.

ಎಲ್ಲರೂ : ಅಂಕಲ್....ಅಂಕಲ್...

ಅಂಕಲ್ ಅಂಕಲ್ ಟ್ವಿಂಕಲ್ ಸ್ಟಾರ್...
ಅಂಕಲ್ ಆಟದ ಸ್ಟಾರ್...

ಬಂಟು : ಅಂಕಲ್ ಅಂಕಲ್, ಇವತ್ತು ನಿಮಗಾಗಿ ಒಂದು ನಾಟಕ ಆಡ್ತೇವೆ.

ಬಿಂಕು : ಸಂಗೀತ ನಾಟಕ....

ಮೀನಿ : ಹಾಲಳ್ಳ ಕಾಲನಿ ಸಂಗೀತ ನಾಟಕ—ಅಂತ.

ಮಿಟ್ಟಿ : ನಮ್ಮ ಕನ್ನಡ ಮೇಷ್ಟ್ರು ದುಗ್ಧವತೀ ಚರಿತ್ರಮ್ ಅಂತ ಬರೆದಿಲ್ವಾ—ಅದನ್ನೆ ತಗೊಂಡು. ನಾಟಕ....

ಸೋನಿ : (ಬಾಳನನ್ನು ತೋರಿಸಿ) ಇವನೇ ಡೈರೆಕ್ಟರ್.

ಬಾಳ : ನಾ ಒಬ್ನೇ ಏನಲ್ಲ, ಎಲ್ಲಾ ಸೇರಿ ಮಾಡೋದು....

ಬಾನಿ : ಬಾಳ, ಚೆನ್ನ, ಸೊಂಪ, ತಂಪ—ಈ ನಾಲ್ಕು ತುಂಬಾ ಚೆನ್ನಾಗಿ ಕುಣೀತಾರೆ.

ನಿಮ್ಮಿ : ಜೇನಿ, ಜೆಟ್ಟಿ, ಸುವ್ವಿ, ಸುಗ್ಗಿ—ಚಂದ ಹಾಡ್ತಾರೆ.

ಬಾಳ : ಮಾತಾಡೋದಿರ್ಲಿ, ನಡೀರಿ ಬೇಗ. ಪ್ರಾರಂಭ ಮಾಡಿ...

ಮಕ್ಕಳು ತಯಾರಿಯಲ್ಲಿ ತೊಡಗುವರು.

ಬಂಟು : ಅಂಕಲ್, ನಾವು ಮಾಡೋರು, ನೀವು ನೋಡೋರು. ನೀವು, ಇಕೋ ಇಲ್ಲಿ. (ರಂಗದ ಮಧ್ಯ ತೋರಿಸಿ) ಇಲ್ಲಿ ಕೂತ್ಕೊಳ್ಳಿ...ಹಂ, ಶುರು ಮಾಡೋಣ,

ಮಕ್ಕಳ ನಾಟಕ ಪ್ರಾರಂಭವಾಗುತ್ತದೆ. ಹನುಮ ಪ್ರೇಕ್ಷಕನಾಗಿ ನೋಡುತ್ತ ಕೂರುತ್ತಾನೆ. ಹಾಡು ಕುಣಿತ ಅಭಿನಯಂಗಳ ನಾಟಕ.

ನದಿ : (ಹಾಡು) ಜುಳು ಜುಳು ಜುಳು ಹರಿಯುವೆ ನಾ
ಬಂಡೆಗಳಾ ಎಡೆಯೆ ।
ತುಳು ತುಳು ತುಳುಕಾಡುವೆ ನಾ
ದಂಡೆಗಳಾ ನಡುವೆ ॥
ಧಡ ಧಡ ಧಡ ಧುಮ್ಮಿಕ್ಕುವೆ
ದರೆಯಂಚಿನ ಕೆಳಗೆ ॥
ಜಲಪಾತದ ರೋಮಾಂಚನ
ಕಾಮನ ಬಿಲ್ ಮಳೆಗೆ

ಒಬ್ಬ : (ಎದುರು ಬಂದು ನಿಂತು–ಹಾಡು)
ಹಾಲಾಗಿ ಹರಿದು ನೆಲ ತಣಿಸುವಂಥ
ಓ ತಾಯಿ ದುಗ್ಧವತಿಯೆ ।
ನಿನ್ನೊಳಿಹ ಶಕ್ತಿ ಮಿತಿಯಿಲ್ಲವಂತೆ
ನಮಗಿತ್ತು ಕರುಣಿಸೌ ತಾಯಿ ॥

ನದಿ : (ಹಾಡು) ಹರಿಯೋ ನೀರು ಬೀಸೋ ಗಾಳಿ
ಲೋಕಕ್ಕೆ ಸೇರಿದ ಗಂಟು ॥
ಬುದ್ಧಿಯ ಬೆಳಸಿ ಶ್ರಮಪಡುವ ಜನಕೆ
ಮೀಸಲು ಇಟ್ಟ ಹಾಗುಂಟು ॥

ಒಬ್ಬ : ಹಾಗಾದರೆ, (ಹಾಡು)
ಹರಸು ತಾಯೀ ಮಕ್ಕಳ ॥ ನಿನ್ನ ಕರುಣೆಯು ಒಕ್ಕಲ...
ಬೆಟ್ಟ ಕಡಿವೆವು । ಕಟ್ಟೆಯಿಡುವೆವು
ಹರಸು ತಾಯೀ .......
ನಾಲೆ ಸಿಗಿವೆವು, ಕಲ್ಲು ಹುಗಿವೆವು
ಹರಸು ತಾಯೀ........
ಭೂಮಿಗೇ ನಂದನವನೆಳೆವೆವು
ಹರಸು ತಾಯೀ.......

ಇತ್ಯಾದಿ ಹಾಡುತ್ತಿರುವಾಗ, ಆ ಒಬ್ಬ ಎಂಜನೀರ್‌ನ ಹಾಗೆ ಸಹಾಯಕರನ್ನೂ ಕರೆದುಕೊಂಡು ಸರ್ವೆ ನಡೆಸುತ್ತಾನೆ ; ಆನಂತರ ಅವನ ಸೂಚನೆ ಪ್ರಕಾರ ಯೋಜನೆಯ ಕೆಲಸಗಳೆಲ್ಲ ನಡೆಯುತ್ತವೆ. ಯಂತ್ರಾಗಾರ ನಿರ್ಮಾಣವಾಗುತ್ತದೆ, ತುದಿಗೆ ಸ್ಲೋಗನ್‌ಗಳು......

ಹಾಲಳ್ಳ ಪ್ರಾಜೆಕ್ಟ್ ಜೈ-ಜೈ
ಎಚ್. ಎಚ್. ಪ್ರಾಜೆಕ್ಟ್ ಜಿಂದಾಬಾದ್

ಹನುಮ ಎದ್ದು ಬಂದು ನಾಟಕದೊಳಕ್ಕೆ ಸೇರಿಕೊಳ್ಳುತ್ತಾನೆ.

ಹನುಮ : ಅಂದರೆ ಏನಾಯ್ತಯ್ಯ ಇಲ್ಲಿಗೆ ?

ಬಂಟ : ಎಲೆಕ್ಟ್ರಿಸಿಟಿ ತಯಾರಾಯ್ತು.

ಮೀನಿ : ವಿದ್ಯುಚ್ಛಕ್ತಿ ಬಂತು.
ಹನುಮ : ಮುಂದಕ್ಕೆ ಏನಯ್ಯಾ ?
ಬಿಂಕು : ಕಂಬ ಹುಗೀತೇವೆ. ತಂತೀ ಬಿಗೀತೇವೆ....
ಹನುಮ : ಅದರ ಮುಂದಕ್ಕೆ—
ಕಾಮು : ಮಿಲ್ ಮಾಡ್ತೇವೆ, ಫ್ಯಾಕ್ಟರಿ ಮಾಡ್ತೇವೆ...
ಕೇಳು : ಕಾರ್ಖಾನೆ ಮಾಡ್ತೇವೆ....
ಮಿಟ್ಟಿ : ಬ್ರೆಡ್ ಮಾಡ್ತೇವೆ. ಬಟ್ಟೆ ಮಾಡ್ತೇವೆ...
ಚಾರು : ಸಕ್ಕರೆ ಕಾರ್ಖಾನೆ, ಸಿಮೆಂಟ್ ಕಾರ್ಖಾನೆ...
ಹನುಮ : ಹೋಯ್, ಇಲ್ಲಿ ಕೇಳಿರಯ್ಯಾ—ನೀವು ಬ್ಯಾಡ, ನಾನೇ ಪಾಯಖಾನೆ ಮಾಡ್ತೇನೆ.
ಚೇರ : ಪಾಯಖಾನೆ ಅಲ್ಲ, ಕಾರ್ಖಾನೆ.
ಹನುಮ : ಹರಿ, ಹರಿ. ಅದನ್ನ ನಾನೇ ಮಾಡ್ತೇನೆ.
ಸೋನಿ : ಮಾಡಿ ಅಂಕಲ್.
ಬಾನಿ : ನೀವೇ ಮಾಡಿ ಅಂಕಲ್.
ಬಾಳ : ನಾವು ವರ್ಕರ್ಸ್ ಆಗ್ತೇವೆ.
ಚೆನ್ನ : ಕಾರ್ಖಾನೇಲಿ ಕೆಲಸ ಮಾಡ್ತೇವೆ.
ತಂಪ : ನಮಗೆ ಸಂಬಳ ಕೊಡಿ.
ಹನುಮ : ಆಯ್ತಯ್ಯಾ ಆಯ್ತು. ನಿಮಗೆಲ್ಲರಿಗೂ ಕೆಲಸ ಕೊಡುವ. ಅಟ್ಟಂಬಟ್ಟೇ ಅತ್ತೀಕಾಯೀ. ಸಂಬಳಾನೂ ಕೊಡುವ, ಹಾಗಂತ ಈಗ ಯಾವುದರ ....... (ಹೆಸರು ಮರೆತು)....
ಬಂಟು : ಕಾರ್ಖಾನೆ....
ಹನುಮ : ಯಾವುದರ ಕಾರ್ಖಾನೆ ಮಾಡುವುದಯ್ಯಾ ?.... ಅಟ್ಟಂಬಟ್ಟೇ ಅಳಲೆ ಕಾಯಿ, ಹೋಳಿಗೆ ಲಾಡು ಕಾರ್ಖಾನೆ ಮಾಡಿಬಿಡ್ತೇನೆ.
ಜೇನಿ : ಮಾಡಿ ಅಂಕಲ್.
ಎಲ್ಲರೂ : ಮಾಡಿ ಅಂಕಲ್.

ಹನುಮ : ಬ್ಯಾಡ ಬ್ಯಾಡ. ತಯಾರಿಸಿದ್ದೆಲ್ಲಾ ನೀವೇ ತಿಂದು ಹಾಕಿ ಬಿಡ್ತೀರಿ. ಆಮೇಲೆ....ಬಟ್ಟೇ ಕಾರಖಾನೆ...

ಬಂಟು : ಕಾರ್ಖಾನೆ...

ಹನುಮ : ಅಟ್ಟಂಬಟ್ಟೆ ಅಂಟಿನಕಾಯಿ, ಬಟ್ಟೆ ಕಾರ್ಖಾನೆ ಮಾಡುವ...ಬ್ಯಾಡ, ಅಷ್ಟೆಲ್ಲಾ ಬಟ್ಟೆ ತಯಾರಿಸಿ ಯಾರ ಮೈಮೇಲೆ ಹೊದೆಸುವುದು?...ಹೀಗೆ ಮಾಡ್ತೇನೆ....

ಜೆಟ್ಟಿ : ಹಾಗೇ ಮಾಡಿ ಅಂಕಲ್.

ಹನುಮ : ಆಫ್ರಿಕಾದಲ್ಲಿ ನಮ್ಮ ಉಮುಂಬಾಸುರರು ಇದ್ದಾರಲ್ಲಾ ಅವರಿಗೆ ಯಾವಾಗಲೂ ಮೃಗಗಳ ಹಾವಳಿ, ಮನುಷ್ಯರ ಹಾವಳಿ...ನಾವು ಕೋವಿ ಕಾರ್ಖಾನೆ ಮಾಡಿ ಬಿಡ್ತೇವೆ....ಇಲ್ಲಿ ಕೋವಿ ಮಾಡಿ ಅವರಿಗೆ ಮಾರುವುದು, ಲಾಭ ಲಪಟಾಯಿಸುವುದು....

ಸುಬ್ಬಿ : ಹಾಗೇ ಮಾಡಿ ಅಂಕಲ್.

ಹನುಮ : ಹಂ, ಅಟ್ಟಂಬಟ್ಟೆ ಅಳಲೇಕಾಯಿ...ಕಾರ್ಖಾನೆ ತಯ್ಯಾರ್....

ಎನ್ನುವಂತೆ ಮಕ್ಕಳೆಲ್ಲ ಫ್ಯಾಕ್ಟರಿ ಆಗಿ ಕೆಲಸಗಾರರಾಗಿ ಪಾರ್ಟೀಶನ್ ಮಾಡಿಕೊಳ್ಳು ವರು. ಮೂಕಾಭಿನಯ–ಸದ್ದು. ಜುಕ್ ಜುಂಕ್ ಜುಂಮ್ ಜುಂವರ್ ಟೀಂಂಂಕ್ ಟೀಂಂಂಕ್—ಇತ್ಯಾದಿ.

ಹನುಮ : ಲಾಭ ಒಂದು... ಲಾಭ ಎರಡು... ಲಾಭ ನಾಲ್ಕು... ಲಾಭ ಎಂಟು.... ಲಾಭ ಹದಿನಾಲ್ಕು.... ಅರೆ! ಹದಿನಾರು ಬರಬೇಕಿತ್ತಲ್ಲ, ಹದಿನಾಲ್ಕೇ ಬಂತು! ಸರೀ ಲಾಭ ಬರ್ತಿಲ್ಲ, ಜಾಸ್ತಿ ಕೆಲಸ ಮಾಡಿ....

ಎದ್ದು ಹೋಗಿ 'ಜಾಸ್ತಿ ಕೆಲಸ ಮಾಡಿ' 'ಸೋಮಾರಿತನ ಮಾಡಬೇಡಿ' ಎನ್ನುತ್ತ ಒಬ್ಬೊಬ್ಬರಿಗೂ ಹೊಡೆಯುತ್ತಾನೆ, ಒದೆಯುತ್ತಾನೆ.

ಬಾಳು : ಊಟಕ್ಕೆ ಸಾಕಾಗೋಲ್ಲ, ಸಂಬಳ ಜಾಸ್ತಿಕೊಡಿ.

ಜೆನ್ನ : ಅಷ್ಟೆಲ್ಲಾ ಲಾಭ ತಗೋತೀರಲ್ಲ, ನಮಗೂ ಕೊಡಿ.

ಎಲ್ಲರೂ : ನಮಗೂ ಕೊಡಿ, ನಮಗೂ ಕೊಡಿ. (ಗಲಭೆ)

ಹನುಮ : ಹೇಳಿದ ಹಾಗೆ ಕೇಳಿಕೊಂಡು ಕೊಟ್ಟಷ್ಟು ತೊಗೊಂಡು ಕೆಲಸ ಮಾಡಿ. ನಾ ಯಜಮಾನ. ನೀವು ಕೆಲಸಗಾರರು. ಹೀಗೆ ಎದುರು ನಿಂತು ಲಟ್ಟೇಕಾಯಿ

ಲಂಡೆಕಾಯಿ ಅನ್ನಕೂಡದು.

ತಂಪ : ಸಂಬಳ ಹೆಚ್ಚು ಕೊಡದಿದ್ರೆ ಕೆಲಸಾನೇ ಮಾಡೋಲ್ಲ.
ಸೊಂಪ : ಸ್ಟ್ರೈಕ್ ಮಾಡ್ತೀವಿ.
ಮೀನಿ : ಮುಷ್ಕರ ಹೂಡ್ತೀವಿ.

ಎಲ್ಲರೂ ಕೆಲಸ ಬಿಟ್ಟು ಬಂದು ಕುಳಿತುಕೊಳ್ಳುತ್ತಾರೆ.

ಹನುಮ : ಭಟರನ್ನ ಕರಸ್ತೇನೆ....ದಂಡು ಬರ ಮಾಡ್ತೇವೆ. ನಿಮಗೆಲಾ ಲಾತು ಹಾಕಿಸ್ತೇನೆ....
ಬಂಟು : ಏನು ಬೇಕಾದರೂ ಮಾಡಿ. ನಾವು ಕೆಲಸ ಮಾಡೋದಿಲ್ಲ...
ಚೆನ್ನ : ನಾವು ಇಲ್ಲೇ ಕೂತು ಸತ್ಯಾಗ್ರಹ ಮಾಡ್ತೇವೆ...
ಬಿಂಕು : ಗಾಂಧಿ ಹೇಳಿದ ಹಾಗೆ ಸತ್ಯಾಗ್ರಹ ಮಾಡ್ತೇವೆ...
ಎಲ್ಲರೂ : ಸತ್ಯಾಗ್ರಹ ಮಾಡ್ತೇವೆ....
ಹನುಮ : ಚರ್ಮಾ ಸುಲಿಸ್ತೇನೆ....
ಕಾಮು : ಜೀವ ತೆಗೆದರೂ ಸರಿ....
ಮಿಟ್ಟಿ : ಕೊಂದು ಹಾಕಿದರೂ ಸರಿ....
ಎಲ್ಲರೂ : ಕೆಲಸಾ ಮಾಡೋದಿಲ್ಲ...
ಹನುಮ : ಪಾಯಿಖಾನೇಗೆ ಬೀಗ ಹಾಕಿಸ್ತೇನೆ....
ಕೇಳು : ಕಾರ್ಖಾನೆಗೆ—
ಹನುಮ : ಹುಂ, ಬೀಗ ಹಾಕಿಸ್ತೇನೆ....
ಎಲ್ಲರೂ : ಹಾಗೇ ಮಾಡಿ...
ಹನುಮ : ಬೆಂಕಿ ಹಚ್ಚಿಸ್ತೇನೆ...
ಬಾನಿ : ನಿಮ್ಮದೇ ಹೋಗುತ್ತೆ...
ಹನುಮ : ಹಾಗಾದರೆ (ಯೋಚಿಸಿ) ಹೌದಾ, ನಿಮ್ಮದೇ ಹಟಾನಾ ? ನನಗೂ ಹಟ ಇಲ್ಲವೋ, ನನಗೂ ಛಲಾ ಇಲ್ಲವೋ...ಕೌರವರಾಯನ ಹಠ, ಕಾವೇರಿ ಮದ....ಇಕೋ, ಇವತ್ತಿಂದ ಈ...
ಬಂಟು : ಕಾರ್ಖಾನೆ ...

ಹನುಮ : ಹುಂ, ನಂದೂ ಅಲ್ಲ, ನಿಮ್ಮದೂ ಅಲ್ಲ. ಅಂದ್ರೆ, ನಂದೂ ಹೌದು, ನಿಮ್ದೂ ಹೌದು....ನೀವೂ ದುಡಿಯೋದು, ನಾನೂ ದುಡಿಯೋದು. ಲಾಭ ಎಲ್ಲರೂ ಹಂಚಿಕೊಳ್ಳೋದು.

ಎಲ್ಲರೂ : ಜಿಂದಾಬಾದ್ ಜಿಂದಾಬಾದ್ ಅಂಕಲ್ ಫ್ಯಾಕ್ಟರಿ ಜಿಂದಾಬಾದ್ !

ಸೈರನ್ ಕೂಗು

ಮೀನಿ : ಓ, ಸೈರನ್!

ಬಂಟು : ಹೋಗೋಣ, ಆಟ ಸಾಕು.

ಎಲ್ಲರೂ : ಹೋಗೋಣ ಹೋಗೋಲಾ....

ಬಂಟು : ಹೋಗ್ತೀವಿ ಅಂಕಲ್

ಮಿಟ್ಟಿ : ನಾಳೆ ಬರ್ತೀವಿ, ಮತ್ತೆ...

ಚೇರ : ನಾಳೆ ಸಂಜೆ....

ಎಲ್ಲರೂ ಓಡುವರು. ಹೋಗುತ್ತಲೇ ಘೋಷಣೆ ;
'ಜಿಂದಾಬಾದ್ ಜಿಂದಾಬಾದ್ ! ಅಂಕಲ್ ಫ್ಯಾಕ್ಟರಿ ಜಿಂದಾಬಾದ್!

ಹನುಮ : ....ಆಟ ತುದೀಲಿ ಬುರುನಾಸು ಆಗಿ ಬಿಡ್ತಲ್ಲ... ತುದೀಲಿ ತಪ್ಪಾಗಿ ಬಿಡ್ತಯ್ಯ.... ಲಾಠೀ ಚಾರ್ಜ್ ಮಾಡಿಸಿ ಬಿಡ್ಬೇಕಾಗಿತ್ತು, ಗೋಲಿಬಾರ್ ಮಾಡಿಸಿ ಬಿಡ್ಬೇಕಾಗಿತ್ತು....

ಎಸ್ನುತ್ತ ಅರಮನೆ ಕಡೆಗೆ ಹೋಗುತ್ತಾನೆ—ಕತ್ತಲು—

*　　*　　*　　*　　*

ಕತ್ತಲಲ್ಲಿ ಡೊಳ್ಳು ತಮಟೆ ಓಲಗ ಮುಂತಾದ ಭಾರೀ ಗದ್ದಲ. ಪಂಜಿನ ಭಾರೀ ಮೆರವಣಿಗೆ. ಆಮೇಲೆ ಕ್ರಮೇಣ ಬೆಳಕು. ಬೆಳಕಾದ ಮೇಲೆ ಹನುಮ ಪ್ರವೇಶ.

ಹನುಮ : ಹೋಯ್...ಕಂಡಿರಾ ದಿಬ್ಬಣ ? ಎಂಥಾ ದಿಬ್ಬಣವಯ್ಯಾ ! ಅದೇನು ಗೊತ್ತಾಯಿತಾ ನಿಮಗೆ ?... ಮಕ್ಕಳ ಆಟ. ಮಳ್ಳೀ ತೋಟ ಅಂತ ಮಾಡಿಬಿಟ್ಟಿರೋ ? ಅಲ್ಲವಯ್ಯಾ ಅಲ್ಲ. ನಿನ್ನೆ ರಾತ್ರಿ ನಮ್ಮ ಕಂಕಲಾಸುರ ದಣಿಗಳು ವಾಪಸು ಬಂದರು. ಅವರದ್ದೇ ದಿಬ್ಬಣ....ಹ್ಞಾಅರಮನೆಯಲ್ಲಿ ಬಂದು ವಸ್ತಿ ಹಾಕಿಬಿಟ್ಟಿದ್ದಾಗಿದೆ. ಈಗ ಬೆಳಗಾಗಿ ಇಷ್ಟು ಹೊತ್ತು ಆಯಿತಲ್ಲ, ಇನ್ನೇನು ಒಡ್ಡೋಲಗ ಕೊಡುವಂಥಾ ಸಮಯ.

**ಒಳಗಿನಿಂದ — ರಾಕ್ಷಸನ ಅಬ್ಬರ**

ಹನುಮ : ಓ.... ಬಂದುಬಿಟ್ಟರು ಒಡ್ಡೋಲಗಕ್ಕೆ— (ಒಳಗೆ ನೋಡಿ) ಹೋಯ್, ಎಲ್ಲಿ ಹೋದ್ರಿ ಚಂಡೆ ಮದ್ದಳೆ ಎಲ್ಲಾ ?...ಬೇಗ ಬನ್ನಿ, ದಣಿಗಳು ಒಡ್ಡೋಲಗಕ್ಕೆ ತಯ್ಯಾರ್ ...ಭಳಿರೇ ಪರಾಕ್ರಮ ಕಂಠೀರವ...

**ಚಂಡೆ ಮದ್ದಳೆಯವರು ಪಾರ್ಶ್ವಕ್ಕೆ ಬಂದು ಕೂತು ಬಾರಿಸತೊಡಗುತ್ತಾರೆ. ಕಂಕಲ ದೈತ್ಯನ ಪ್ರವೇಶ ಒಡ್ಡೋಲಗ ಕುಣಿತ, ಅಭಿನಯ. ಆತ ತನ್ನ ದಿನಚರಿಯನ್ನು ಅಭಿನಯಿಸಿದ ಹಾಗೆ—ಹನುಮ ವಿವರಿಸುತ್ತ ಹೋಗುತ್ತಾನೆ.**

ಹನುಮ : ಭಳಿರೇ ಪರಾಕ್ರಮ ಕಂಠೀರವ—ಗಂಡರಗಂಡ, ವೈರಿಗಳ ರುಂಡಾ-ಮುಂಡಾ ಕಂಡಾಬಟ್ಟೆಕೊಂಡ ಗಂಡಭೇರುಂಡ, ಚಂಡ ಪ್ರಚಂಡಾ, ಜಗಭಂಡಾ–ಭಳಿರೇ ಶಹಬ್ಬಾಸ್ ಕಂಕಲಾಸುರ ಮಹಾಪ್ರಭೂ–ಭೋ ಪರಾಕ್, ಭೋ ಪರಾಕ್, ಭೋ ಪರಾಕ್....ಓಹೋಯ್, ಪಂಚಪಂಚ ಉಷಃ ಕಾಲದಲ್ಲಿ ಕೋಳಿ ಕೂಗಿದ್ದು ಕೇಳಿದ್ದೇ ತಡ—ಕೋಳಿ ಸಾರಿನ ನೆನಹಾಗಿ—ಎಚ್ಚರವಾಗಿ ಬಿಡ್ತಾರೆ. ಎದ್ದದ್ದೇ ವರಳು ಕಲ್ಲಿಗೆ ನಮಸ್ಕಾರ ಹಾಕ್ತಾರೆ, ಅಂದ್ರೆ ಈಶ್ವರ ದೇವ್ರಿಗೆ ಪ್ರಣಾಮ ಮಾಡ್ತಾರೆ. ಅದಾದ ಮೇಲೆ ನಿತ್ಯಕರ್ಮಗಳು, (ಒಂದು ಎರಡು ಬೆರಳುಬಿಚ್ಚಿ) ತಿಳೀತಲ್ಲ ! ಅದಾದ ಮೇಲೆ ಮುಖಕ್ಷೌರ : ಮುಖಕ್ಷೌರವಾದ ಮೇಲೆ ಕೈಪೊರಕೆ ಹಿಡಿದು ದಂತಮಂಜನ— ಇದೆಲ್ಲ ಹೊಸತಾಗಿ ಆಫ್ರಿಕಾದಲ್ಲಿ ಕಲಿತು ಕೊಂಡದ್ದು—ದಂತಮಂಜನ ಆದಮೇಲೆ ಅಭ್ಯಂಜನ–ಆಮೇಲೆ ಮತ್ತೆ ವರಳು ಕಲ್ಲಿಗೆ ಜಳಕ. ಹೂವು, ಅಂದ್ರೆ ಈಶ್ವರ ಪೂಜೆ. ತದನಂತರದಲ್ಲಿ ಸಪ್ತಮೃಗಗಳ ಮಾಂಸದಿಂದ ಷಡ್ರಸೋಪೇತವಾಗಿ ತಯ್ಯಾರಿಸಿದಂಥಾ ಮೃಷ್ಟಾನ್ನಭೋಜನದ ಭುಂಜನ ಗುಂಡು ಹೊಟ್ಟೆ ತೃಪ್ತಿಯಿಂದ ನೆಲ ಮುಟ್ಟಿ ಕೂತಮೇಲೆ ಎರಡೂ ಕೈ ನೆಲಕ್ಕೂರಿ ಮೇಲಕ್ಕೇಳ್ತಾರೆ. ಮೂರು ಸಲ ಘರ್ ಅಂತ ತೇಗಿ ಒಡ್ಡೋಲಗಕ್ಕೆ ಹೊರಡ್ತಾರೆ. ಹಾಗೆ ಇವತ್ತು ಒಡ್ಡೋಲಗ ಕೊಟ್ಟಿರುವಂಥಾ ಸಮಯ······

ರಾಕ್ಷಸ : (ಗರ್ಜಿಸುತ್ತಾನೆ)

ಹನುಮ : ಒಡ್ಡೋಲಗ ಕೊಟ್ಟಂಥಾ ಸಮಯ, ಮತ್ತೇನು ರಾಜಕಾರ್ಯ ಅಂತಿ

ದಾರೆ.... (ರಾ.ಗೆ) ಸದ್ಯ ಇವತ್ತು ಯಾವುದೂ ಕಾಣ್ತಾ ಇಲ್ಲ, ಪರಾಕೇ.

ರಾಕ್ಷಸ : (ಗರ್ಜನೆ)

ಹನುಮ : ಹೌದೋ, ಹಾಗಾದರೆ ಮೃಗಯಾ ವಿಹಾರ ಹೊರಡ್ತೇವೆ ಅಂತಿದಾರೆ. ರಾ. ಗೆ. ಆಗಬಹುದು ಮಹಾಸ್ವಾಮಿ. ಅಲ್ಲ, ಆಗಕೂಡದು ಅಂದ್ರೆ ಕೇಳ್ತಾರೋ, ಅದಕ್ಕಾಗಿ ಆಗಬಹುದು ಅಂತ ಅಪ್ಪಣೆ ಕೊಟ್ಟೇಬಿಟ್ಟೆ.

ರಾಕ್ಷಸ : (ಗರ್ಜನೆ)

ಹನುಮ : ಇದೇನಯ್ಯಾ ಹುನುಮನಾಯಕಾ, ವಿದೇಶದಿಂದ ಹಿಂತಿರುಗಿ ಬಂದು ನಾವು ನೋಡುತಾ ಇರುವಾಗ ಇದೇನು ಕಾಣತಾ ಇದೆ; ಈ ನಮ್ಮ ಉದ್ಯಾನವನ ಯಾವತ್ತೂ ಇಲ್ಲದ ಹಾಗೆ ಹೀಗೆ ಚಂದವಾಗಿ ಕಂಗೊಳಿಸ್ತಾ ಉಂಟಲ್ಲ, ಚಿಗುರಿಕೊಂಡಂಥ ಗಿಡಮರಗಳು, ಚಿಲಿಪಿಲಿಗುಟ್ಟುವಂಥಾ ತಂಡೋಪತಂಡ ಪಕ್ಷಿಗಳು, ಲಂಡೇಲಗಾಮು ಲಟ್ಟಿಲಸಗು ಅಂತಿದಾರೆ ! ...ಹೌದಲ್ಲಾ ಮಹರಾಯರೆ, ನಾನೂ ಸಮಾ ನೋಡೇ ಇರ್ಲಿಲ್ಲ— (ರಾ.ಗೆ) ಹೌದು ಮಹಾಸ್ವಾಮಿ, ನಾನೂ ಕಂಡೆ.

ರಾಕ್ಷಸ : (ಗರ್ಜನೆ)

ಹನುಮ : ಕಲ್ಪವೃಕ್ಷವೇ ಇರತಕ್ಕಂಥಾ ದೇವೇಂದ್ರನ ನಂದನವನದ ಹಾಗೆ ತೋರುತ್ತ ದಲ್ಲಾ ಅಂತಿದಾರೆ, ಹ್ವಾ, ಯಾರಾದರೂ ದನ ತಂದು ಕೂಡ್ತಾರೆ ಬಿಡಿ ಮೇಯೋಕೆ—(ರಾ.ಗೆ)ನಾನೂ ಅದೇ ಹೇಳ್ಬೇಕು ಅಂತಿದ್ದೆ, ಪ್ರಭುಗಳೇ

ರಾಕ್ಷಸ : (ಗರ್ಜನೆ)

ಹನುಮ : ಸಂತೋಷವಾಯಿತು. ಪರಮ ಸಂತೋಷವಾಯಿತು, ಇನ್ನು, ಇದೋ ಬೇಟೆಗೋಸ್ಕರವಾಗಿ ತೆರಳಿ ಬಿಡುವ ಅಂತಿದಾರೆ— (ರಾ. ಗೆ.) ಹಿಂದೇ ಹೊರಟುಬಿಟ್ಟೇವು ಮಹಾಸ್ವಾಮಿ !....ದೊರೆಚಿತ್ತ ಕಾಯಿಕತ್ತ....

ರಾಕ್ಷಸ ಹನುಮ ಕುಣಿಯುತ್ತ ನಿಷ್ಕ್ರಮಿಸುತ್ತಾರೆ.

* * * * *

ಹನುಮ : ಓಯ್, ಬೇಟೆ ಮುಗಿಸಿ ಬಂದು ಬಿಟ್ಟೆವಯ್ಯಾ ಒಳ್ಳೇ ಭರ್ಜರಿ ಬೇಟೆ ....ಅಂಥಾ ಮಟಮಟಾ ಮಧ್ಯಾಹ್ನದಲ್ಲೇ. ಕಾಡಿನಲ್ಲಿ ಎಲ್ಲಿ ನೋಡಲಿ,

ಪ್ರಾಣಿಗಳೇ. ಸಿಂಹ, ಶಾರ್ದೂಲ, ಹುಲಿ, ಕರಡಿ, ಕುರ್ಕ, ಬರ್ಕ, ಕಾಡೆಮ್ಮೆ ಕಾಡುಕೋಣ, ಕಾನ್‌ಕುರಿ, ಕಾನ್‌ಕೋಳಿ, ಹಂದಿ, ಮಿಕಾ— ಒಂದಾ ಎರಡಾ ? ಮಟ್ಟಿ-ಮಟ್ಟೀಲೂ ಮೃಗಗಳೇ. ಒಂದು ತಾಸಲ್ಲಿ ನಾಲ್ಕು ಬಂಡಿ ತುಂಬಿಸಿಕೊಂಡು ಬಂದುಬಿಟ್ಟೆವು... ದಣಿಗಳಿಗೆ ಆಶ್ಚರ್ಯ ವಾಗಿಬಿಡ್ತಯ್ಯಾ, ಇದೇನಾಗಿಬಿಟ್ಟಿದೆ ಅಂತ... ಅಲ್ಲ, ಆಫ್ರಿಕಾದ ಕಾಡು ನೋಡಿ ದಣಿಗಳು ಹೇಳ್ತಾ ಇದ್ರು, ಕಾಡು ಅಂದ್ರೆ ಇದಪ್ಪಾ ಅಂತ. ಈಗ ಈ ನಮ್ಮ ಕಾಡು ಅದಕ್ಕಿಂತ ಸೊಂಪಾಗಿ ಬಿಟ್ಟಿದೆಯಲ್ಲಾ... ಅಲ್ಲಿ ಆಣೆಕಟ್ಟು ಹಾಕಿದ್ದಕ್ಕೇ ಹೀಗೆ ಸೊಂಪಾಗಿ ಬಿಟ್ಟಿತಾ ?... ಇರಲಿಕ್ಕಿಲ್ಲ ಇರಲಿಕ್ಕಿಲ್ಲ, ಯಾಕೆಂದರೆ, ನಾನು ಇಲ್ಲಿಗೆ ಬಂದಾಗ ಒಂದು ಮಾಸದ ಹಿಂದೆ ಹೀಗಿರಲಿಲ್ಲ. ಗಿಡ ಮರ ಎಲ್ಲಾ ಬರಲು ಬರಲಾಗಿದ್ದವಪ್ಪ ....ಸಾಯಲಿಬಿಡಿ, ಸುಡುಗಾಡು. ಯೋಚಿಸಿ ತಲೆಯಾಕೆ ಹಾಳುಮಾಡಿ ಕೊಳ್ಳುವುದು ?... ಒಳಗೆ ಅರಮನೇಲಿ ದಣಿಗಳು ಪಲ್ಲಂಗದ ಮೇಲೆ ಮಲ್ಲಂಗ ಹಾಕಿದಾರೆ. ನಾವೂ ಇಲ್ಲೇ ಎಲ್ಲಾದರೂ ಮರದ ಕೆಳಗೆ ಕಾಲು ನೀಡಿ ಕಣ್ಣು ಬಾಡಿಸೋದು ಒಳ್ಳೇದು, ಸಂಜೆ ತನಕ—ಅಲ್ಲವೋ ?

ಹನುಮ ನಿಷ್ಕ್ರಮಿಸುತ್ತಾನೆ. ಸ್ವಲ್ಪ ಹೊತ್ತು ಕಳೆದು ಹುಡುಗರ ಗದ್ದಲ. ಹುಡುಗರ ಪ್ರವೇಶ. ಅವರಲ್ಲಿ ಜೇನಿ ಎಂಬ ಹುಡುಗಿ ನೆಲದ ಮೇಲೆ ಏನೋ ಕಂಡು, ಶಶ್-ಎಂದು ಹುಡುಗರ ಗದ್ದಲ ನಿಲ್ಲಿಸುತ್ತಾಳೆ.

ಜೇನಿ : (ಮೇಲುದನಿಯಲ್ಲಿ) ಅಂಕಲ್ ದೈತ್ಯ ಬಂದಿದಾರೆ.

ಎಲ್ಲರೂ : ಆಂ ? ಹೌದಾ ? ಹ್ಯಾಗೆ ಹೇಳ್ತೀಯೆ ?

ಜೇನಿ : ಇಲ್ಲಿ ನೋಡಿ ಹೆಜ್ಜೆ.

ಸುಬ್ಬಿ : ಹೌದು, ಹೌದು,

ಎಲ್ಲರೂ : ಹೌದು ಹೌದು....

ತಟ್ಟನೆ ಬೆಳಕು ಮೂಡುತ್ತದೆ. ಜೇನಿ, ಜಿಟ್ಟಿ, ಸುಬ್ಬಿ ಸುಗ್ಗಿ ಮಧುರವಾದ ಧಾಟಿ ಯೊಂದನ್ನು ಗುನುಗತೊಡಗುತ್ತಾರೆ. ಆಲಾಪದ ಹಿನ್ನೆಲೆಯಲ್ಲಿ ಹುಡುಗರೆಲ್ಲ ನೃತ್ಯಗತಿ ಯಲ್ಲಿ ಚಲಿಸುತ್ತ ತೋಟದ ಗಿಡಮರಗಳನ್ನು ಎಲೆ-ಹೂಗಳಿಂದ ಮತ್ತೂ ಶೃಂಗಾರ ಗೊಳಿಸುತ್ತಾರೆ. ಈಗ ತೋಟ ಮನೋಹರವಾಗಿದೆ. ನೆಲದ ತುಂಬ ಬಣ್ಣದ ಹೂಗಳ

ಠಂಗೋಲಿ ರಚಿತವಾಗಿದೆ. ಅನಂತರ—

ಚಿಂಟು : ಅರಮನೆ ಒಳಗೇ ಹೋಗೋಣ.

ಚಿಂಕು : ಹೌದು, ನಡೀರಿ. ಅಂಕಲ್ ಜಯಂಟ್‌ನ ಮಾತಾಡಿಸೋಣ.

ಎಲ್ಲರೂ ಅರಮನೆಯೊಳಕ್ಕೆ ಹೋಗುತ್ತಾರೆ. ಸ್ವಲ್ಪ ಹೊತ್ತು ಕಳೆದ ಮೇಲೆ ಹನುಮ ಕಣ್ಣುತಿಕ್ಕುತ್ತ ಪ್ರವೇಶಿಸುತ್ತಾನೆ.

ಹನುಮ : ಅದು ಯಾವಾಗ ನಿದ್ರೆ ಬಂದು ಬಿಟ್ಟಿತೋ....ನಮ್ಮ ಎಂಟನೇ ಪೋರ ಕುಂಟುತಾ ಬರುತಿತ್ತು. ಅಪ್ಪಯ್ಯಾ ಅನ್ತು. ಓ ಅಂತ ಕೈನೀಡಿದೆ. ಬಿದ್ದು ಬಿಡ್ತು. ಮತ್ತೆ ನೋಡಿದ್ರೆ ಮಗೂ ಇಲ್ಲ, ಮಾಯ್ತು. ನೆಲದ ತುಂಬಾ ಹೂವು. ಇದೇನು ಅಚೋದ್ಯ ಮಾರಾಯರೆ, ಮನುಷ್ಯ ಜಾತಿ ಹೋಗಿ ರಾಕ್ಷಸ ಜಾತಿಗೆ ಬಂದಮೇಲೆ ಸ್ವಪ್ನ ಅಂತ ಕಂಡಿದ್ದಿಲ್ಲಪ್ಪ. ಇದೇ ಮೊದಲು. (ಮೇಲೆ ಕೆಳಗೆ ನೋಡಿ) ಅಲೇ !...ಇನ್ನೂ ಸ್ವಪ್ನದೊಳಗೇ ಇದ್ದೇನೋ.... ಅಲ್ಲಿ ಕಂಡದ್ದೇ. ಹೀಗೆ ನೆಲದ ಮೇಲೆಲ್ಲಾ ಹೂವು, ಗಿಡದ ಮೇಲೆಲ್ಲಾ ಹೂವು ! ಅಲಲೆ ! (ಒಳಗಿನಿಂದ ಸದ್ದು) ಏನು ಗಲಾಟೆ ?.... ಓಯ್, ಹುಡುಗರ ಸಂಗತಿ ಮರತೇ ಬಿಟ್ಟಿದ್ದೆ—ಅವೇ ಬಂದು ಬಿಟ್ಟವೋ ಅಂತ. (ಹೋಗಿ ನೋಡಿ) ಹೋಯ್, ಅರಮನೆ ಒಳಗೇ ಹೋಗಿ ಬಿಟ್ಟದಾವೆ ಅಂತ ಕಾಣುತ್ತೆ....ಒಳ್ಳೇ ಗೊಜಗೊಂಡ ಆಗಿ ಹೋಯ್ತಲ್ಲ ಮಾರಾಯರೆ, ಇನ್ನೇನು ರಾಕ್ಷಸರು ಕೆಂಡವೇ ಆಗಿ ಬಿಡ್ತಾರೆ...ನನ್ನ ಚರ್ಮ ಸುಲೀತಾರೆ ಬಿಡಿ....ಅರೆ ಅರೆ, ದಣಿಗಳೇ ಹೊರಗೆ ಬಂದುಬಿಟ್ಟರಲ್ಲ. ಹುಡುಗರು ಮುತ್ತಿಗೆ ಹಾಕಿಬಿಟ್ಟಿದಾವೆ... (ಪಕ್ಕಕ್ಕೆ) ಏಯ್ ಚಂಡೆ, ದಣಿಗಳಿಗೆ ಕ್ರೋಧ ಬಂದುಬಿಟ್ಟಿದೆ, ಉರಿ ಚಂಡೆ ತಗೋ, ಬೇಗ....

ಚಂಡೆಯವನು ಬಂದು ಪಕ್ಕಕ್ಕೆ ಕೂತು ಬಾರಿಸತೊಡಗುತ್ತಾನೆ. ಅರಮನೆಯೊಳಗಿಂದ ರಾಕ್ಷಸ ಮತ್ತು ಆತನನ್ನು ಸುತ್ತಿಕೊಂಡ ಹುಡುಗರು ಬರುತ್ತಾರೆ; ಚಂಡೆಯ ತಾಳಕ್ಕೆ ಕುಣಿತ. ರಾಕ್ಷಸ ಹುಡುಗರನ್ನ ಬೆದರಿಸುತ್ತಾನೆ. ಅಟ್ಟುತ್ತಾನೆ. ಹುಡುಗರು ಅದನ್ನು ಆಟವೆಂದುಕೊಂಡು ಆಡತೊಡಗಿದ್ದಾರೆ. ಹನುಮಾ ಅವರನ್ನು ಅಟ್ಟಲು ತೊಡಗುತ್ತಾನೆ. ಹುಡುಗರು—ಗುಂಡುಗುಡು ಗುಡುಗುಂಡು, ಗುಡಾನೆ ಗುಡುಗುಡು ಎನ್ನುತ್ತ ರಾಕ್ಷಸ, ಹನುಮರ ಜೊತೆ ಮೋಜಿನಿಂದ ಆಡುತ್ತಾರೆ. ಇಡೀ ದೃಶ್ಯ ಹುಡುಗರ

ಮುಟ್ಟಾಟದಂತಾಗಿ ಬಿಡುತ್ತದೆ. ತುದಿಯಲ್ಲಿ ಸೈರನ್ ಕೂಗು ಕೇಳಿಸುತ್ತದೆ.

ಬಂಟು : ಅಕೋ, ಸೈರನ್.

ಕೇಳು : ಓ, ಎಷ್ಟು ಬೇಗ ಹೊತ್ತಾಗಿ ಹೋಯ್ತು ಇವತ್ತು.

ಚೆನ್ನ : ನಡೀರಿ, ಹೋಗೋಣ. ಹೊತ್ತಾಗುತ್ತೆ.

ಎಲ್ಲರೂ : ಹೌದು, ನಡೀರಿ ನಡೀರಿ.

ಕಾಮು : ಮತ್ತೆ ನಾಳೆ ಬರೋಣ.

ಹುಡುಗರು ಹೊರಡಲು ತಯಾರಾಗುತ್ತಾರೆ. ರಾಕ್ಷಸ ಏನೂ ಮಾಡಲಿಕ್ಕೆ ತೋಚದೆ ಮುಂಜುಗರದಿಂದ ನಿಲ್ಲುತ್ತಾನೆ. ಹನುಮ ಬೆರಗಾಗಿ ನಿಂತಿದ್ದಾನೆ.

ಹುಡುಗರು : ಟಾಟಾ ಟಾಟಾ ಅಂಕಲ್ ಜಯಂಟ್ ಬೈ ಬೈ ಬೈ ಬೈ ಬೈ...
ಟಾಟಾ ಟಾಟಾ ಹನ್ಮೂ ಅಂಕಲ್ ಬೈ ಬೈ ಬೈ ಬೈ ಬೈ....
ಹುಡುಗರು ಓಡುತ್ತ ನಿಷ್ಕ್ರಮಿಸುತ್ತಾರೆ. ಹೋಗುತ್ತಿದ್ದಂತೆ ಅವರ ಕೂಗು : 'ಜಿಂದಾಬಾದ್ ಜಿಂದಾಬಾದ್ ! ಅಂಕಲ್ ಜಯಂಟ್ ಜಿಂದಾಬಾದ್ ಹನ್ಮೂ ಅಂಕಲ್ ಜಿಂದಾಬಾದ್ !'........

ರಾಕ್ಷಸ : (ಕೊಂಚಕಾಲ ಧಿಙ್ಮೂಢನಾಗಿದ್ದು ಆಮೇಲೆ ಗರ್ಜಿಸುತ್ತಾನೆ)

ಹನುಮ : ಕಳ್ಳ ಮುಂಡೇ ಗಂಡರಾ, ಹುಚ್ಚು ಮುಂಡೇಗಂಡರಾ, ನಾಯಿ ಮುಂಡೇ ಗಂಡರಾ...ನಿಮ್ಮ ಬಲೀ ಹಾಕಿಬಿಡ್ತೇವೆ, ನಿಮ್ಮ ತಿಥೀ ಮಾಡಿಬಿಡ್ತೇವೆ—ಅಂತಿದಾರೆ ದಣಿಗಳು, ಹುಡುಗರಿಗೆ. (ರಾ.ಗೆ) ಹೌದು ದಣಿಗಳೇ, ಕಳ್ಳ ಮುಂಡೇಗಂಡರು, ಬಲೀ ಹಾಕಿಬಿಡ್ಬೇಕು.

ರಾಕ್ಷಸ : (ಗರ್ಜನೆ)

ಹನುಮ : ಮತ್ತೂ ಮತ್ತೂ ರೋಷ ಉಕ್ಕತಾ ಇದೆ—ಅಂತಿದಾರೆ. (ಚಂಡೆ.ಗೆ) ಏಯ್, ಚಂಡೆ ಅಬ್ಬರ ಹೊಡಿ.

ರಾಕ್ಷಸ : (ಗರ್ಜನೆ)

ಹನುಮ : ಒಂದೊಂದು ಪಿಳ್ಳೇನೂ ಹಿಡಿದು ಕೋಳೀ ಮರಿ ಹಾಗೆ ಬಾಯಲ್ಲಿ ಹಾಕಿ ಜಗಿದು ಬಿಡತಿದ್ದೆ—ಅಂತಾರೆ. (ರಾ.ಗೆ) ಹೌದು, ದಣಿಗಳೇ, ಕಚಕಚ ಜಗದು ಬಿಡಬೇಕತ್ತು.

ರಾಕ್ಷಸ : (ಗರ್ಜನೆ)

ಹನುಮ : ಅಲ್ಲಿ ಆಫ್ರಿಕಾದಲ್ಲಿ ತಿಮಿಂಗಿಲದ ಔತಣ ಮಾಡಿಸಿದ್ದರಲ್ಲಾ ಆವಾಗ ಎಲುಬು ಸಿಕ್ಕಿ ದಂತ ಜಕಂ ಆಗಿ ಹೋಗಿದೆಯಂತೆ. ಇಲ್ಲದಿದ್ರೆ ಜಗಿದೇ ಬಿಡತಿದ್ರಂತೆ. (ರಾ.ಗೆ) ಹೌದು, ಮಹಾಸ್ವಾಮಿ, ಇಲ್ಲದಿದ್ರೆ, ರಸದಾಳೀ ಕಬ್ಬು ಜಗಿದ ಹಾಗೆ ಜಗಿದೇ ಬಿಡಬೋದಿತ್ತು.

ರಾಕ್ಷಸ : (ಗರ್ಜನೆ)

ಹನುಮ : ನಮ್ಮ ಅಜ್ಜಂದಿರ ಕಾಲದಲ್ಲಿ ಕುಬೇರ ದೇವರು ನಮಗೆ ಉಂಬಳಿ ಹಾಕಿ ಕೊಟ್ಟ ನೆಲ ಇದು. ಇದೇನು ಅವರ ಅಪ್ಪನ ಮನೆ ಆಸ್ತೀನಾ—ಅಂತಿ ದಾರೆ. (ರಾ.ಗೆ) ಅದೇ ಮಾಸ್ವಾಮಿ, ಇವರ ಅಪ್ಪನ ಮನೆ ಆಸ್ತೀನಾ ?

ರಾಕ್ಷಸ : (ಗರ್ಜನೆ)

ಹನುಮ : ಅಲಾಲಾಲಃಲಾಲಾ ! ಈ ನನ್ನಂಥಾ ಪರಾಕ್ರಮಿ, ದೈತ್ಯ ಕುಲತಿಲಕ ಅನ್ನೊ ಅಂಥವನ ಅರಮನೇಗೆ ತೋಟಕ್ಕೆ ಈ ಮನುಷ್ಯ ಕುನ್ನಿಗಳ ಬಂದು ಲಗ್ಗೇ ಹಾಕುವುದೇ. ಸಹಿಸಲು ಆಗಲಿಕ್ಕಿಲ್ಲವಯ್ಯಾ, ಆಗಲಿಕ್ಕಿಲ್ಲ—ಅಂತಿದಾರೆ, (ರಾ.ಗೆ) ನಿಜಕ್ಕೂ ಆಗಲಿಕ್ಕಿಲ್ಲ ಪ್ರಭುಗಳೇ.

ರಾಕ್ಷಸ : (ಗರ್ಜನೆ)

ಹನುಮ : ಇಲ್ಲಿ ಸುತ್ತ, ಆರಾಳು ಎತ್ತರದ ಕೋಟೆ ಹಾಕಿಸಿಬಿಡು, ನರಕುನ್ನಿಗಳು ಇಲ್ಲಿ ಕಣ್ಣು ಹಾಯಿಸಲಿಕ್ಕಿಲ್ಲ ; ನಮ್ಮ ಪರಮ ಮಿತ್ರರು ಉಮುಂಬಾಸುರರ ಅರಮನೆ ಕೋಟೆ ಉಂಟಲ್ಲವೋ ಅದೇ ಪ್ರಕಾರದಲ್ಲಿ— ಅಂತಿದಾರೆ. (ರಾ.ಗ) ಅಪ್ಪಣೆ ಮಹಾಸ್ವಾಮಿ.

ರಾಕ್ಷಸ : (ಗರ್ಜನೆ)

ಹನುಮ : ಬೆಳಗಾಗೋದರೊಳಗೆ ಕೋಟೆ ತಯಾರಾಗಿ ಬಿಡ್ಬೇಕ್ ಅಂತಿದಾರೆ....... ನಮಗೆ ಒಳ್ಳೇ ಗಳಪಾಶಿ ಬಂತಲ್ಲಯ್ಯಾ, ಮಕ್ಕಳನ್ನ ಸುತ್ತಿ ಮನುಷ್ಯರನ್ನ ಸುತ್ತಿ ನಮ್ಮ ಬುಡಕ್ಕೆ ಬಂತಲ್ಲವೋ ... ಆಕ್ಕಂಬ್ಕ್ ಆಗ, ಎಂಬ್ಕೆ ಎಡಿಯು....

ರಾಕ್ಷಸ : (ಗರ್ಜನೆ)

ಹನುಮ : ಮತ್ತೂ ಮತ್ತೂ ಕ್ರೋಧ ಉಕ್ಕತಾನೇ ಇದೆಯಂತೆ. (ಚಂ.ಗೆ) ಏಯ್, ಜೋಡು ತಾಳದ ಅಬ್ಬರ ಹೊಡಿ,

ರಾಕ್ಷಸ ಅಬ್ಬರಿಸುತ್ತ, ಅರಮನೆ ಕಡೆ ಹೊರಡುತ್ತಾನೆ.

ಹನುಮ : (ರಾ.ಗೆ) ಹುಷಾರು ಮಾಸ್ವಾಮಿ, ಕ್ರೋಧದಲ್ಲಿ ಕಾಲು ಎಪರಾ ತಪರಾ ಆಗಿ ಮುಗ್ಗರಿಸಿದರೆ ಕಷ್ಟ.

ರಾಕ್ಷಸನ ನಿರ್ಗಮನ.

ಹನುಮ ; ಇವರಿಗೆ ಕ್ರೋಧ ಸಮನೆ, ಆದರೆ ನಾವು ಹೇಗಯ್ಯಾ ಬೆಳಗಾಗೋದರೊಳಗೆ ಆರಾಳು ಎತ್ತರದ ಕೋಟೆ ಕಟ್ಟಿಸಿ ನಿಲ್ಲಿಸುವುದು ?....
ನೋಡುವ, ಅಲ್ಲಿ ಎಂಥದೋ ಕಾಲನಿ ಉಂಟಲ್ಲ, ಅಲ್ಲಿ ಹೋಗಿ ನೋಡುವ ಜನ ಸಿಕ್ಕಿಯಾರೋ ಅಂತ.

ಮತ್ತೆ ರಾಕ್ಷಸನ ಪ್ರವೇಶ

ರಾಕ್ಷಸ : ಹ್ಹಾ ಹ್ಹಾ ಹ್ಹಾ ಹ್ಹಾ ಹ್ಹಾ

ಹನುಮ : ಮತ್ತೆ ಉಕ್ಕಿತಾ ಮಾಸ್ವಾಮಿ....?

ರಾಕ್ಷಸ : ಹಾ ಹಾ ಹಾ ಹಾ ಹಾ ! (ಗರ್ಜನೆ)

ಹನುಮ : ಓ, ಆಶ್ಚರ್ಯವಾಯಿತಯ್ಯಾ ಆಶ್ಚರ್ಯವಾಯಿತಯ್ಯಾ ಅಂತಿದಾರೆ.... (ರಾ. ಗೆ) ಓ ಹೌದಾ ?

ರಾಕ್ಷಸ : (ಗರ್ಜನೆ)

ಹನುಮ : ಈ ಇಂಥಾ ಗ್ರೀಷ್ಮ ಋತುವಿನಲ್ಲಿ, ಮನೋಹರವಾಗಿರತಕ್ಕಂಥಾ ತಂಗಾಳಿಯೇ ಬೀಸಲಿಕ್ಕೆ ತೊಡಗಿತಲ್ಲಾ—ಅಂತ ಉದ್ವಕ್ಕೆ ಉದ್ಗಾರ ಎಳೀತಿದಾರೆ. (ರಾ. ಗೆ) ಅಹುದಲ್ಲವೋ ದಣಿಗಳೆ. ನಿಮಗೂ ಕೋಪ ಉಕ್ಕುತ್ತಿತ್ತು, ನನಗೂ ಉಕ್ಕುತ್ತಿತ್ತು. ಹಾಗಾಗಿ ಇಬ್ಬರೂ ಮೊದಲು ಗ್ರಹಿಸಲೇ ಇಲ್ಲ !

ರಾಕ್ಷಸ : (ಗರ್ಜನೆ)

ಹನುಮ : ಪರಿಮಳ ಪರಿಮಳ-ಅಂತ ಬಿಕ್ಕತಿದಾರೆ. (ರಾ. ಗೆ) ಕಾಶ್ಮೀರದೇಶ ಉಂಟಲ್ಲವೋ ದಣಿಗಳೆ, ಹಾಗೆ ಆಗಿಬಿಟ್ಟಿದೆ-ಅದೇ ತಂಪು, ಅದೇ ಕಂಪು, ಅದೇ ಸೊಂಪು, ಅದೇ ಪೆಂಪು, ಅದೇ ಇಂಪು-ಎಲ್ಲಾ ಗುಂಪು ಗುಂಪು,

ರಾಕ್ಷಸ : (ಗಿಡ ಮರ ನೆಲ ನೋಡಿ-ಗರ್ಜನೆ)

ಹನುಮ : ಗಿಡದ ಮ್ಯಾಲಕ್ಕೆ ಹೂವು. ಇದೇನು ಹಸಿರಯ್ಯಾ ಇದೇನು ಬಣ್ಣವಯ್ಯಾ-

ಅಂತಿದಾರೆ. (ರಾ. ಗೆ) ಅದೇ, ವರ್ಣನೆ ಏವಡಿದೆನೂಲ್ಲ ಮಾಸ್ವಾಮಿ-

ರಾಕ್ಷಸ : ಆ ಹ್ಹಾ ಹ್ಹಾ ಹ್ಹಾ ಹ್ಹಾ ಹ್ಹಾ....

ಹನುಮ : ಏನು ಹೇಳಿದರೋ ಗೊತ್ತಾಗಲಿಲ್ಲ. ನೆಲದ ಮೇಲೆ ಬಿದ್ದು ಹೊರಳಾಡ ಬೇಕು, ಅನ್ನಿಸ್ತಿದೆಯಯ್ಯಾ, ಹಂದಿಯ ಹಾಗೆ ಅಂದಿರಬೋದು ಬಿಡಿ.

ರಾಕ್ಷಸ–'ಹ್ಹಾಹ್ಹಾ ...' ಎಂದುಕೊಳ್ಳುತ್ತಾ ಅರಮನೆಯ ಕಡೆ ನಡೆಯುತ್ತಾನೆ.

ಹನುಮ : ಪರಮಾನಂದವಾಗಿಬಿಟ್ಟಿದೆ ಸವಾರಿಗೆ ! ಆಫ್ರಿಕಾದೇಶದಲ್ಲಿ 'ಮಂಗಾ ಮೂಲಂಗಿ' ಅಂತ ಒಂದು ಥರಾ ಹೆಂಡ ಸಿಗತಿತ್ತು. ಅದು ಕುಡಿದಾಗ ಹಾಗೇ ಆಗತಿತ್ತು....ಹೋಯ್, ಸವಾರಿ ಆನಂದ ಪಡ್ತದೆ ಅಂತ ನಾವು ಆನಂದ ಪಡಲಿಕ್ಕೆ ವೇಳೆ ಉಂಟೋ ? ಇಲ್ಲವಯ್ಯ. ನಾವಿನ್ನು ರಾತ್ರೋ ರಾತ್ರಿ ಕೋಟೆಗೋಡೆ ಕಟ್ಟಿ ನಿಲ್ಲಿಸಬೇಕಲ್ಲ.....ಇಲ್ಲದಿದ್ರೆ ಅವರ ಸಿಟ್ಟು ಎಂಥಾದ್ದಂಥ ನಿಮಗೆ ತಿಳೀಲಿಕ್ಕಿಲ್ಲ–ನಾಳೆ ನನ್ನನ್ನ ತಲೆಕೆಳಗು ಮಾಡಿ ಮರಕ್ಕೆ ನೇತುಹಾಕಿ ಮೆಣಸಿನಕಾಯಿ ಹೊಗೆ ಹಾಕಿಸಿಯಾರು ; ತಾವು ದೂರಕ್ಕೇ ನಿಂತು ಹೀಗೇ ಹಹ್ಹಹ್ಹಾ ಅಂತ ಬಾಯಿ ಕಿಸೀತಾ, ಚೂಪುಗಲ್ಲು ಹೆರಕಿ ಕವಣೇಲಿ ಇಟ್ಟು ಬೀಸಿ ಬಡಿದಾರು....

ಎನ್ನುತ್ತ ನಿಷ್ಕ್ರಮಿಸುತ್ತಾನೆ.

* * * * *

ಕತ್ತಲು–ಮೊಂದಿ ಬೆಳಕಿನಲ್ಲಿ ಅಸಂಖ್ಯ ಜನ ಕೋಟೆ ಕಟ್ಟುತ್ತಿರುವುದು.. ಕೆಲಸಗಾರರ ಗದ್ದಲ ಕೂಗು— 'ಐಸಾ ಐಸಾ...ಚಂಡೀ ದೆವ್ವ ಐಸಾ...ಗುಂಡೀ ಭೂತ ಐಸಾ... ಚಾಮುಂಡಮ್ಮ ಐಸಾ...ಗಾವುಂಡಪ್ಪ ಐಸಾ'...ಇತ್ಯಾದಿ ಇತ್ಯಾದಿ—
ಮತ್ತೆ ಪೂರ್ತಾ ಕತ್ತಲು. ಪುನಃ ಮಸಕು ಬೆಳಕಾದಾಗ ಹನುಮನಾಯಕನ ಪ್ರವೇಶ– ಈಗ ಕೋಟೆ ಗೋಡೆ ಕಾಣಿಸುತ್ತಿದೆ.

ಹನುಮ : ಕಂಡೀರೇನಯ್ಯಾ ನಮ್ಮ ಪರಾಕ್ರಮ ! ರಾತ್ರಿ ಬೆಳಗಾಗೋದರೊಳಗೆ ಸುತ್ತಾ ಆರಾಳೆತ್ತರ ಕೋಟೆ ಕಟ್ಟಿಸಿ ಬಿಟ್ಟೆವಲ್ಲ !... ನಿಜ ಹೇಳೊದಾದ್ರೆ ನನಗೂ ಹೆದರಿಕೆ ಆಗಿತ್ತು ಮಾರಾಯರೆ. ಈ ರಾಕ್ಷಸರ ಸಹವಾಸ ನೋಡಿ, ಆಮೇಲೆ ಮೈಯಲ್ಲಿ ಎಲುಬು ಉಳೀಲಿಕ್ಕೆ ಉಂಟಾ ? ಪುಣ್ಯ. ಆ ಕಾಲನಿ ಉಂಟಲ್ಲಯ್ಯ, ಅಲ್ಲಿಗೆ ಹೋದೆ. ಅಲ್ಲಿ ಒಬ್ಬ ಕಂತ್ರಾಟ್

ಕಂತ್ರಾಟ್ ಅಂತ ಇದ್ದ. ಸರ್ಕಾರಿ ಕಂತ್ರಾಟನಂತೆ. ಯಾ ಕೆಲಸವಾಗಲಿ, ಎಂಥಾ ಕೆಲಸವಾಗಲಿ, ಅವನು ರಾತ್ರಿ ಬೆಳಗಾಗೋದ್ರೊಳಗೇ ಮಾಡು ವವನಂತೆ, ಬೆಳಗಾಗೋದ್ರೊಳಗೆ ಕೆಲಸಾ ಮುಗಿಸಿ, ಹಣ ಎಣಿಸ್ಕೊಂಡ್ ಧಿಮ್‌ದಗಡಿ ಅಂತ ನಡೆದೇಬಿಟ್ಟ... ಈಗ ಹುಡುಗರು ಅಲ್ಲ ಹುಳಾ ಬರಲಿಕ್ಕಿಲ್ಲ. ನಾನೇ ಬರಲಿಕ್ಕಿಲ್ಲ ಮತ್ತೆ ಕೇಳಿದರೆ....ಒಂದು ಸುರಂಗಮಾರ್ಗ ಉಂಟು ಅನ್ನಿ ನಮ್ಮ ಮಟ್ಟಿಗೆ....ಹೋಯ್, ಆ ಕಂತ್ರಾಟ್ ಹೋಗಿ ಇಷ್ಟು ಹೊತ್ತಾದ್ರು ಬೆಳಗೇ ಆಗಲಿಲ್ಲಲ್ಲ...ಯಾಕೆ ಅಂತೇನೆ.... (ಒಳಗಿನಿಂದ ಕೂಗು) ಸವ್ವಾರಿ ದಂದಿ ಹಿಡಿದು ಕೂಗು ಹಾಕ್ತಾ ಬಂದೇ ಬಿಡ್ತಲ್ಲ. ಇತ್ಲಾಗಿ....

ರಾಕ್ಷಸ ದೊಂದಿ ಹಿಡಿದು ಪ್ರವೇಶಿಸುತ್ತಾನೆ.

ರಾಕ್ಷಸ : (ಗರ್ಜನೆ)

ಹನುಮ : ಸಂತೋಷವಾಯ್ತಂತೆ ಕೋಟೆ ತಯಾರಾದ್ದಕ್ಕೆ. (ರಾ.ಗೆ) ನಾನು ಅಲ್ಲವೋ ಪ್ರಭುಗಳೇ ತಮ್ಮ ತೈನಾತಿ ? ನೆರವೇರಿಸಿಯೇ ಬಿಟ್ಟೆ. ಹಾಗಂತ ಅಲ್ಪ ಸ್ವಲ್ಪ ಕಷ್ಟವಾಯಿತಾ ?....

ರಾಕ್ಷಸ : (ಗರ್ಜನೆ)

ಹನುಮ : ಹೋಯ್, ಅಷ್ಟುದ್ದಾ ನಾಲಗೆಯುಂಟು, ಶಾಭಾಸ್ ಹೇಳಲಿಕ್ಕೆ ಬಾಯಿ ಬರಲಿಲ್ಲ ನೋಡಿ....ಹಾಸಿಗೇಲಿ ಹತ್ತು ಸಲ ಆಚೆಯೀಚೆ ಹೊರಳಿದರಂತೆ, ಅರುಣೋದಯವಾಗಲಿಲ್ಲ ಯಾಕೆ, ಸೂರ್ಯೋದಯವಾಗಲಿಲ್ಲ ಯಾಕೆ— ಅಂತ ಕೇಳತಿದಾರೆ....ನಂಗೂ ಇವತ್ತು ಸಿಕ್ಕಲಿಲ್ಲಪ್ಪ ಸೂರ್ಯ...(ರಾ. ಗೆ) ಹೊರಗೆ ಹೋಗಿ ನೋಡಿ ಬರ್ತೇನೆ, ದಣಿಗಳೇ.

ಹನುಮ —ಹೊರ ಹೋಗಿ ಆಮೇಲೆ ವಾಪಸು ಬರುತ್ತಾನೆ.

ಹನುಮ : (ರಾ. ಗೆ) ನಮಗಿಬ್ಬರಿಗೂ ಅಕ್ಕಲ್ ಹೋಗಿಬಿಡ್ತಲ್ಲ ದಣಿಗಳೇ !.... ಆರಾಳೆತ್ತರ ಕೋಟೆ ಅಲ್ಲವೋ ? ಸೂರ್ಯೋದಯ ಆಗಿ ನಾಲ್ಕು ತಾಸು ಆಯ್ತು. ಆದರ ಬೆಳಕು ಒಳಗೆ ಬರೋದು ಹ್ಯಾಗೆ ?....ಹೊರಗೆ ಕೋಟೆ ಮೇಲೆ ಬಿದ್ಕಂಡು ಕಾಯ್ತಿದೆ !

ರಾಕ್ಷಸ : (ಗರ್ಜನೆ)

ಹನುಮ : ಹಾಗೋ, ಹಾಗೋ, ಸಂತೋಷ—ಅಂತಿದಾರೆ.

ರಾಕ್ಷಸ : (ಗರ್ಜನೆ)

ಹನುಮ : ಭಾರೀ ತಾಪವಯ್ಯಾ—ಅಂತಿದಾರೆ. (ರಾ. ಗೆ) ನೆನ್ನೆ ಭಾರೀ ಕೋಪ ಬಂದಿತ್ತಲ್ಲ ಧಣಿಗಳೇ, ಅದರದ್ದೇ ಇದ್ದೀತು ತಾಪ.

ರಾಕ್ಷಸ : (ಗರ್ಜನೆ)

ಹನುಮ : ತಡೀಲಿಕ್ಕಾಗದ ನಾತ—ಅಂತಿದಾರೆ. ನೀವೇ ಇದ್ದೀರಲ್ಲ ನಮಗೆಲ್ಲಾ ಪ್ರಾಣನಾಥ! (ರಾ. ಗೆ) ಹೊಸದಾಗಿ ಗೋಡೆ ಕಟ್ಟಿದ್ದಲ್ಲವೋ ಪ್ರಭು ಗಳೇ, ಗಾರೆಗಚ್ಚಿನ ನಾತ ಇದ್ದೀತು.

ರಾಕ್ಷಸ ಗರ್ಜಿಸುತ್ತ ತೆರಳುತ್ತಾನೆ.

ಹನುಮ : ಇದ್ದೀತಿದ್ದೀತು — ಅಂತಿದಾರೆ !....ಹೌದಯ್ಯಾ.... ಇಷ್ಟೆತ್ತರ ಗೋಡೆ ಕಟ್ಟಿ ಈ ಗೋಡೆ ಬಾವಿಯಲ್ಲಿ ವಸ್ತಿ ಮಾಡಲಿಕ್ಕೆ ಆದೀತಾ ?...

ರಾಕ್ಷಸ ಮತ್ತೆ ಬರುತ್ತಾನೆ.

ರಾಕ್ಷಸ : (ಗರ್ಜನೆ)

ಹನುಮ : ಅಲೆ, ಹೌದಾ ಪ್ರಭುಗಳೆ !....ಇವರು ಹೋಗುತ್ತಿದ್ದಾಗ ದಾರಿ ಮೇಲೆ, ಹಕ್ಕಿಗಳು ಕಂಕಲ ಕಂಕಲ ಅಂತ ಚೀರ್ತಾ ಬಿದ್ದು ಸಾಯ್ತಿವೆಯಂತೆ.... (ತಾನೂ ಕಿವಿಗೊಟ್ಟು – (ರಾ.ಗೆ) ದಣಿ, ಅಕೋ ಮತ್ತೂ ಚೀರ್ತಾನೇ ಇವೆ. (ಪ್ರೇಕ್ಷಕರಿಗೆ) ನಾನೂ ಜತೇಲಿ ಬರಬೇಕಂತೆ. ಸತ್ತು ಬಿದ್ದ ಹಕ್ಕಿ ಗಳನ್ನ ಚೀಲಕ್ಕೆ ತುಂಬಿಕೊಳ್ಳೋಕೆ ! (ರಾ. ಗೆ) ನಡೀರಿ ! ಧಣಿ.

ಇಬ್ಬರೂ ನಿಷ್ಕ್ರಮಿಸುತ್ತಾರೆ.

* * * *

ಹನುಮ–ಈಗ ಪ್ರೇಕ್ಷಾಂಗಣದಲ್ಲಿ ಹೊರಭಾಗದಿಂದ ಪ್ರವೇಶಿಸಿ ಬರುತ್ತಾನೆ.

ಹನುಮ : ಹೋಯ್, ಹ್ಯಾಗಾಯಿತು ಕಂಡಿರಾ? ಸಿಟ್ಟು ಮಾಡಿದ್ದು ಹುಡುಗರ ಮ್ಯಾಲೇ.... ಶಿಕ್ಷೆ ಕೊಟ್ಟು ಕೊಂಡದ್ದು ತನ್ನ ಮ್ಯಾಲೇ ... ಎರಡು ತಿಂಗಳಾಯಿತಲ್ಲ ಈ ಕೋಟೆ ಕಟ್ಟಿ ದಿನ ಇಡೀ ಕತ್ತಲು, ಗಾಳಿ ಹೋಗ ಲಿಕ್ಕಿಲ್ಲ, ಯಾವಾಗ ನೋಡಿದರೂ ತಾಪ! ಮತ್ತೆ ಅದೆಂಥದೋ ದುರ್ನಾತ, ಮಾರಾಯರೆ!...ಗಿಡಮರ ಎಲ್ಲ ಎಲೆ ಉದುರಿ ಬಕ್ಕಲು

ಬರಲು ನಿಂತವು. ಹಕ್ಕಿ ಸತ್ತು ಸತ್ತು ಬಿದ್ದವು. ಅವೂ ಈಗ ಇಲ್ಲಿ ಸುಳಿಯೋದೇ ಇಲ್ಲ.... ಈ ರಾಕ್ಷಸರೇ ಹಾಗೆ-ಕಾಲು ಮೆಟ್ಟಿದದ್ದೂ ತಿಳೀದು ಕೈ ಹಿಡಿದದ್ದೂ ತಿಳೀದು. ಸಿಟ್ಟು ಅಂದ್ರೆ ಸಿಟ್ಟು ಹಠ ಅಂದ್ರೆ ಹಠ...

ಮುಂದೆ ಹನುಮನಾಯಕ ಹೇಳುತ್ತ ಹೋಗುವಂತೆ ಅದೇ ರೀತಿ ಹುಡುಗರ ಮೂಕಾಭಿನಯ ಕಾಣಿಸುತ್ತದೆ.

ಆ ಹುಡುಗರು ಪಾಪ, ದಿನಾ ಬಂದು ಆಡಿಕೋತಿದ್ದವು. ಇವರ ನೆಲಾ ತಿನ್ನತಿದ್ದವಾ ?....ಆಮೇಲೂ ದಿನಾ ಬರತಿದ್ದವು ಮಾರಾಯ್ರೆ. ಕೋಟೆ ಗೋಡೆ ಮುಟ್ಟಿ ನೋಡಿದವು. ತಟ್ಟಿ ನೋಡಿದವು, ಕುಟ್ಟಿ ನೋಡಿದವು; ಒತ್ತಲಿಕ್ಕೆ ನೋಡಿದವು, ಎತ್ತಲಿಕ್ಕೆ ನೋಡಿದವು, ಅದನ್ನೇ ಹತ್ಲೀಕ್ಕೂ ನೋಡಿದವು. ಆಗಲಿಕ್ಕಿಲ್ಲ ಅಂತ ಕಂಡಮೇಲೆ ಬಿಟ್ಟವು...ಹಾಗಂತ ಈಗಲೂ ದಿನಬಿಟ್ಟು ದಿನವಾದರೂ ಬರದೆ ಇರಲಿಕ್ಕಿಲ್ಲ. ಬರ್ತವೆ, ಅಲ್ಲೇ ನಿಂತು ಕೋಟೆಗೋಡೆ ನೋಡ್ತವೆ, ಆಮ್ಯಾಲೆ ಹಿಂದಕ್ಕೆ ಹೋಗ್ತವೆ... ಓಯ್, ಹಾಗಂತ ಈ ನಮ್ಮ ದಣಿಗಳಿಗೂ ಸಾಕಷ್ಟು ಆಯ್ತಲ್ಲ....ಈ ಕೋಟೆಗೋಡೆ ಒಳಗೆ, ಕಬ್ಬಿಣದ ಮೂಸೇಲಿ ಹೆಗ್ಗಣ ಹಾಕಿಟ್ಟ ಹಾಗೆ ಆಗಿದಾರೆ.... ಈಗೀಗ ದೇಹಕ್ಕೂ ಸೌಖ್ಯವಿಲ್ಲ.... ನಾನು ಮಾತ್ರ, ದಿನಕ್ಕೆ ಒಂದು ಸಲವಾದರೂ ಹೊರಕ್ಕೆ ಬರುವವನೇ ; ಒಂದು ಸಲ, ಗಾಳೀ ತಿಂದು, ಬೆಳಕು ಕುಡಿದು ಹೋಗದಿದ್ದರೆ ನನಗೆ ಆಗಲಿಕ್ಕಿಲ್ಲಪ್ಪ.... ಬಂದು ಬಿಟ್ಟೆ....

ಒಳಗಿನಿಂದ ರಾಕ್ಷಸನ ಕೂಗು.

ಹನುಮ : ಓ, ಶುರವಾಯ್ತಲ್ಲ ಅಬ್ಬರ ಹಾಕೋಕೆ....ಓ ಬಂದೆ, ದಣಿಗಳೆ.

ರಂಗಕ್ಕೆ ಹೋಗುತ್ತಾನೆ. ಅಷ್ಟರಲ್ಲಿ ರಾಕ್ಷಸ ಸೋತ ಹೆಜ್ಜೆಯಲ್ಲಿ ಪ್ರವೇಶಿಸುತ್ತಾನೆ.

ರಾಕ್ಷಸ ; (ದಣಿದ ಗರ್ಜನೆ)

ಹನುಮ : ಆಗಲಿ ದಣಿಗಳೆ. ಅಪ್ಪಣೆ ದಣಿಗಳೆ... ಕೈ ಹಿಡಕೋಬೇಕಾ ? (ಅವನ ಕೈ ಹಿಡಿದು ಅರಮನೆ ಕಡೆಗೆ ನಡೆಸುತ್ತ) ನಡೀರಿ, ದಣಿ. ಮೆಲ್ಲ, ಮೆಲ್ಲ, ಜ್ವಾಕೆ... (ಅವನನ್ನು ಒಳಕ್ಕೆ ಕಳಿಸಿ ಪುನಃ ತಾನು ಹೊರಬಂದು) ದೇಹ

ದಲ್ಲಿ ಸೌಖ್ಯವಿಲ್ಲವಂತೆ. ಏನೇನೂ ಸೌಖ್ಯವಿಲ್ಲವಂತೆ...ಅದೇನೋ ಅರಮನೆ ಒಳಗೇ ಲಂಘನ ಚಿಕಿತ್ಸೆ ಮಾಡಿಕೋತಾರಂತೆ. ಹದಿನೈದು ದಿನ ಕಟ್ಟೆ ಕಾಂತದಲ್ಲಿ ಇರತ್ತೇವೆ, ಯಾರನ್ನೂ ಬಿಡಲಿಕ್ಕಿಲ್ಲ, ಒಂದು ಹುಳವನ್ನೂ ಕೂಡ ಬಿಡಲಿಕ್ಕಿಲ್ಲ. ನೀನೂ ಕೂಡ ಪ್ರವೇಶ ಮಾಡಲಿಕ್ಕಿಲ್ಲ—ಹುಶಾರ್ —ಅಂದರು. (ಹೊರಗೆ ನೋಡಿ) ಅರೆ, ಅದೇನದು ? ಬೆಳಕು ಬರತಾ ಉಂಟಲ್ಲ ! (ಹೋಗಿ ನೋಡಿ ಬಂದು) ಹೋಯ್, ಇದೇನಯ್ಯಾ ಬಂತು ನಮಗೆ ಗ್ರಹಚಾರ...ಅವತ್ತು ಆ ಕಂತ್ರಾಟನ ಕೆಲಸ ನೋಡಿದಾಗಲೇ, ಅನುಮಾನ ಬಂತಯ್ಯಾ ನಮಗೆ, ಹಾಗೇ ಆಗಿಬಿಡ್ತಲ್ಲ....ಸುಮಾರು ದೊಡ್ಡದೇ ಉಂಟು ಬಿರುಕು. (ಮತ್ತೆ ಹೋಗಿ ನೋಡಿ ವಾಪಸು ಬಂದು) ಹೋಯ್, ಈ ಕೈ ಹೀಗೆ ಹೋಗ ಬಹುದಯ್ಯಾ ತೂರಿಸಿದರೆ, ಅಷ್ಟು ದೊಡ್ಡ ಬಿರುಕು ! (ಮತ್ತೆ ಹೋಗಿ ನೋಡಿಬಂದು) ಹೋಯ್, ಆ ಮಕ್ಕಳೆಲ್ಲಾ ಬಂದು ನಿಂತುಬಿಟ್ಟಿವೆ ಅಲ್ಲಿ ಹೊರಗೆ. ಬಿರುಕಿನಲ್ಲಿ ಕಾಣಿಸಿತಯ್ಯಾ, ಮತ್ತೆ ಅವಕ್ಕೆ ನನ್ನ ಮುಖ ಕಂಡು ಬಿಟ್ಟೀತು ಅಂತ ಬಂದುಬಿಟ್ಟೆ...(ಸದ್ದು, ನೋಡಿ–) ಅಲಲೆ ! ಒಂದು ತುಂಡು ಕಳಚಿಯೇ ಬಿಟ್ಟಿತಲ್ಲ.... ಹೋಯ್, ಇದು ಗಳಪಾಶಿಯೆ ... ಈಗ ಏನು ಮಾಡೋದು ? ಇದು ನಮ್ಮ ಕುತ್ತಿಗೆಗೆ ಬಂತು, ಸುಮ್ಮನೆ ಉಳಿಯೋ ದಲ್ಲ. ಹೋಗಿ, ಅಲ್ಲಿ ಆ ಕಡೆಯಲ್ಲಿ ಇರುವ ಒಂದು ಚಪ್ಪಡಿಯನ್ನಾ ದರೂ ತಂದು ಮುಚ್ಚತೇನೆ... ಯಮರಾಮಾಯಣ ಮಾರಾಯ್ರೆ, ನಮಗೆ ಧರ್ಮ ಸಂಕಟ...

ಹನುಮ ಹೊರ್ಗುತ್ತಾನೆ. ಜೇನಿ ಪ್ರವೇಶಿಸುತ್ತಾಳೆ. 'ಅಂಕಲ್, ಅಂಕಲ್, ಜಯಂಟ್ ಮಾಮಾ ; ಎಂದು ಮೆಲು ದನಿಯಲ್ಲಿ ಕರೆಯುತ್ತ ಹಗುರವಾಗಿ ಚಲಿಸುತ್ತಾಳೆ. ಹುಡುಗರೆಲ್ಲ ಮೆಲು ಹೆಜ್ಜೆಯಲ್ಲಿ ಮೃದುವಾದ ಒಂದು ಧಾಟಿ ಗುನುಗುತ್ತ ಪ್ರವೇಶಿಸಿ ರಂಗದ ತುಂಬ ಚಲಿಸುತ್ತಾರೆ ; ತೋಟವನ್ನು ಕೊಂಚ ಶೃಂಗರಿಸುತ್ತಾರೆ. ಅನಂತರ ಅರಮನೆ ಕಡೆ ನಡೆಯುತ್ತಾರೆ. ಅದಾದ ಮೇಲೆ ಚಪ್ಪಡಿ ಹೊತ್ತು ಹನುಮ ಪ್ರವೇಶಿಸುತ್ತಾನೆ. ಆತ ಪ್ರವೇಶಿಸುತ್ತಿದ್ದ ಹಾಗೇ ಭಾರೀ ಸದ್ದು ; ಬೆಳಕು ಹರಿದು ಬರುತ್ತದೆ. ಹನುಮ ಆಕಡೆ ನೋಡುತ್ತ ಕೈಲಿದ್ದ ಚಪ್ಪಡಿಯನ್ನು ಧೊಪ್ಪೆಂದು ಕೆಡವಿ

ಕೊಳ್ಳುತ್ತಾನೆ.

ಹನುಮ : ಆಯ್ತಲ್ಲಯ್ಯ ಥೂಪ್!.... ಈ ಕಡೆ ಕೋಟೆಗೋಡೆ ಇಡೀಗೆ ಇಡೀ ಅಪ್ಪಡಿ ಎಪ್ಪಡೀ ಕುಸಿದುಬಿಡ್ತಲ್ಲ ಇನ್ನು ಈ ಚಪ್ಪಡಿ ತಗೊಂಡು ಏನು ಮಾಡೋದು.... (ಚಪ್ಪಡಿ ಮೇಲೆ ತಾನೂ ಕುಸಿದು ಕೂತು) ನಮ್ಮ ದಣಿಗಳು ಇದನ್ನು ಕಂಡರು ಅಂದರೆ, ಆಕ್ಷಣಕ್ಕೆ ನನ್ನ ತಪ್ಪಡಿತುಪ್ಪಡಿ

ಹನುಮ ಯೋಚಿಸುತ್ತ ಕೂತಿರಲು ಒಳಗಿಂದ ರಾಕ್ಷಸ ಮತ್ತು ಹುಡುಗರ ಪ್ರವೇಶ. ಎಲ್ಲರೂ ಹರ್ಷೋತ್ಸವವೆನ್ನುವಂತೆ ಆಡುತ್ತ ಕುಣಿಯುತ್ತ ಹಾಡುತ್ತ ಬರುತ್ತಾರೆ. ಹನುಮ ದಿಙ್ಮೂಢನಾಗಿ ನಿಲ್ಲುತ್ತಾನೆ.

ಹುಡುಗರು : (ಹಾಡು) ಅಂಕಲ್ ದೈತ್ಯ ಅಂಬೆಗಾಲು। ಸುತ್ತಾ ಮುತ್ತಾ ಹೂವಿನ ಕೋಲು।

ರಾಕ್ಷಸ : (ನಗು/ಹಾಡು) ಹಿ ಹ್ಹಿ ಹ್ಹೀ ಲಾಲಾ ಲೂಲು। ಹೆ ಹ್ಹೆ ಹ್ಹೇ ಲಾಲಾ ಲೂಲೂ।

ಹುಡುಗರು : (ಹಾಡು) ದೈತ್ಯ ಮಾಮನ ದಂಡಿಗೆ ಸಾಲು॥ ಸುತ್ತಾ ಮುತ್ತಾ ಹೂವಿನ ಕೋಲು॥

ರಾಕ್ಷಸ : (ನಗು/ಹಾಡು) ಹಿಹ್ಹಿಹ್ಹೀ ಲಾಲಾಲೂಲು॥ ಹೆಹ್ಹೆಹ್ಹೆ ಲಾಲಾ ಲೂಲೂ।

ರಾಕ್ಷಸ—ಪೆಚ್ಚಾಗಿ ನಿಂತ ಹನುಮನನ್ನು ನೋಡುತ್ತಾನೆ. ಅವನ ಹತ್ತಿರ ಹೋಗಿ ಖುಷಿಯಿಂದ—

ರಾಕ್ಷಸ : ಹಿಹ್ಹಿಹ್ಹಿ ಲಾಲಾಲೂಲು! ಹೆಹ್ಹೆಹ್ಹೆ ಲಾಲಾಲೂಲು॥

ಹನುಮ : ಲಂಬಾ ಎಳೆದರೆ ಲಾಲಾ। ಕೊಂಬು ಕೊಟ್ಟರೆ ಲೂಲೂ॥

ಹುಡುಗರೆಲ್ಲ 'ಹನ್ನೂ ಅಂಕಲ್' ಎಂದು ಅವನನ್ನು ಸುತ್ತುವರಿಯುತ್ತಾರೆ. ಹನುಮ—ತನ್ನ ದಣಿಯ ಅಭಿಪ್ರಾಯ ತಿಳಿಯದೆ, ತಾನೂ ಹುಡುಗರ ಜೊತೆ ಸೇರುವುದು ಸರಿಯೋ ತಪ್ಪೋ ಎಂದು ಯೋಚಿಸಿ, ಕೊನೆಗೆ ಹುಡುಗರನ್ನು ಅಟ್ಟುತ್ತ ಹೋಗುತ್ತಾನೆ.

ಬಂಟು : (ಹಾಡು) ಟ್ವಿಂಕಲ್ ಟ್ವಿಂಕಲ್ ಲಿಟ್ಲ್ ಸ್ಟಾರ್। ಅಂಕಲ್ ಹನ್ನೂ ಮೇಕ್ಸ್ ಎ ವಾರ್.

ಹುಡುಗರೆಲ್ಲ ಆಟದ ಅಮಲಿನಲ್ಲಿರುವಾಗ—ಸೈರನ್ ಸದ್ದು.

ಹುಡುಗರು : ಟಾಟಾ ಟಾಟಾ ಜಯಂಟ್ ಮಾಮಾ। ಬೈಬೈ ಬೈಬೈ ಬೈ...
ಟಾಟಾ ಟಾಟಾ ಹನ್ನೂ ಅಂಕಲ್। ಬೈಬೈ ಬೈಬೈ ಬೈ...

ಎಂದು ಹಾಡಿಕೊಳ್ಳುತ್ತ, ಓಡುತ್ತ ನಿಷ್ಕ್ರಮಿಸುತ್ತಾರೆ.

"ಲಂಬಾ ಎಳೆದರೆ ಲಾಲಾ ಕೊಂಬು ಎಳೆದರೆ ಲೂಲೂ"...ಅವರು ಹೋದ ಮೇಲೆ, ರಾಕ್ಷಸ ಹಿಹ್ಹಿಹ್ಹಿಹ್ಹಿ—ಎಂದು ಭಾರೀ ಖುಷಿಯಿಂದ ಸುತ್ತುತ್ತಾನೆ. ಹನುಮನ ಹತ್ತಿರ ಬಂದು ನಗುತ್ತಾನೆ. ಹನುಮನೂ ನಗುತ್ತಾನೆ. ಇಬ್ಬರೂ ನಗುತ್ತ ಕುಣಿಯುತ್ತ ಅದರಲ್ಲೇ ಸಂಭಾಷಣೆ ನಡೆಸುತ್ತಾರೆ. ಅನಂತರ ರಾಕ್ಷಸ, ಸುತ್ತ ಹೂವು ಅರಳಿರುವುದನ್ನು, ಹಕ್ಕಿ ಹಾಡುತ್ತಿರುವುದನ್ನು ಬೆಳಕು ಗಾಳಿ ಒಳಕ್ಕೆ ತುಳುಕಿ ಬಂದಿರುವದನ್ನು, ತನ್ನ ದೇಹ ಸೌಖ್ಯಗೊಂಡಿರುವುದನ್ನು ಮುಂತಾಗಿ—'ಹಿಹ್ಹಿಹ್ಹಿ ಲಾಲಾ ಲೂಲೂ' ಎಂದು ಹಾಡಿಕೊಳ್ಳುತ್ತ ಅಭಿನಯಿಸುತ್ತ ತೋರಿಸುತ್ತಾನೆ. ಆಮೇಲೆ ಅರಮನೆಗೆ ಹೋಗುತ್ತಾನೆ.

ಹನುಮ : (ತಾನೂ) ಹಿ ಹ್ಹಿ ಹ್ಹಿ ಹ್ಹಿ ಲಾಲಾ ಲೂಲೂ....ಭಯಂಕರ ಆನಂದವಾಗಿ ಬಿಟ್ಟಿದೆಯಯ್ಯಾ, ನಮ್ಮ ದಣಿಗಳಿಗೆ ಮರಣಾಂತರ ಆನಂದವಾಗಿ ಬಿಟ್ಟಿದೆ ...ಒಂದು ಗಳಿಗೆಯಲ್ಲಿ ದೇಹಕ್ಕೆ ಎಂಥಾ ಸೌಖ್ಯ ಬಂದು ಬಿಟ್ಟಿತಯ್ಯಾ—ಅಂತಾರೆ !...

ರಾಕ್ಷಸ ಮತ್ತೆ ಬರುತ್ತಾನೆ.

ರಾಕ್ಷಸ : ಹಿ ಹ್ಹಿ ಹ್ಹಿ ಲಾಲಾ ಹಿ ಹ್ಹಿ ಹ್ಹಿ ಲೂಲೂ....

ಎನ್ನುತ್ತ ಅಭಿನಯಿಸಿ ತೋರಿಸುತ್ತಾನೆ.

ಹನುಮ : ಅಪ್ಪಣೆ ದಣಿ. ತಾವು ಹೇಳಿದ ಹಾಗೆ—ಲಂಬಾ ಎಳೆದರೆ ಲಾಲಾ, ಕೊಂಬು ಕೊಟ್ಟರೆ ಲೂಲೂ...

ರಾಕ್ಷಸ ಹೋಗುತ್ತಾನೆ.

ಹನುಮ : ಈ ಕೋಟೆಗೋಡೆ ಒಡೆಸಿ ನೆಲಸಮ ಮಾಡಿಬಿಡು ಅಂದರು.... ನಾನೂ ಅದೇ ಕಾಯ್ತಿದ್ದೆ ಮಾರಾಯರೆ...ಆ ದರಿದ್ರ ಕಂತ್ರಾಟ್ ಗಳಪಾಶಿ ತಂದಿಟ್ಟಿದ್ದ. ಅಂತೂ ಪುಣ್ಯ, ಬಚಾವಾದೆ....ಹಿಹ್ಹಿಹ್ಹಿ ಲಾಲಾ...

ಇತ್ಯಾದಿ ಗುನುಗಿಕೊಳ್ಳುತ್ತಾ, ನಿಷ್ಕ್ರಮಿಸುತ್ತಾನೆ.

* * * *

ಹನುಮ ಆಡಿಟೋರಿಯಂ ಹಿಂಬಾಗದಿಂದ ಪ್ರವೇಶಿಸುತ್ತಾನೆ.

ಹನುಮ : ಹೋಯ್, ದೋಣಿ ಒಳಗೆ, ದೊಣ್ಣೆ ಹೊರಗೆ !....ಗೊತ್ತಾಗಲಿಲ್ಲವೋ ? ...ನಾ ಹೊರಗೆ, ನಮ್ಮ ದಣಿಗಳು ಒಳಗೆ. ಹೌದಯ್ಯ, ನಾ ಹೊರಗೆ.

ಈಗ—ನಿಮ್ಮ ಹಾಗೇ... ನಮಗೂ ಒಳಗೆ ಹೋಗಲಿಕ್ಕಿಲ್ಲ.... ಕೋಟೆ ಗೋಡೆ ಕೆಡವಿಸಿ ಹಾಕಿದೆವು ನೋಡಿ, ಅದಾಗಿ, ದಿವಾಮಾನದ ಪ್ರಕಾರ ಹೇಳುವುದಾದರೆ ಹದಿನ್ನೈದೋ, ಮೂವತ್ತೋ, ಐವತ್ತೋ ದಿನಗಳಾದ ವಯ್ಯ,ತಿಂಗಳೆರಡು ತಿಂಗಳು ಅನ್ನಿ. ಈಗ,ಹೋಯ್,ದಿನಾ ಸಾಯಂಕಾಲ ಆ ಹುಡುಗರೆಲ್ಲ ಬರ್ತವೆ, ನಮ್ಮ ದಣಿಗಳನ್ನ ಕೂಡಿಕೊಂಡು ಆಟ ಆಡ್ತವೆ. ಅವು ಹುಡುಗರಾದರೆ, ನಮ್ಮ ದಣಿ ಶಿಶು !.... ಯಾವತ್ತೂ ನಮ್ಮ ದಣಿ ನಕ್ಕದ್ದು ಅಂತ ಇಲ್ಲ ಮಾರಾಯ್ರೆ, ಈಗ ಕಂಡರೆ ಮಾತ್ರ ಯಾಹೊತ್ತಿಗೂ ಹೆಹ್ಹೆಹ್ಹೆ...ಇಲ್ಲ, ಹಿಹ್ಹಿಹ್ಹಿ...ಮೊನ್ನೆ ಆ ಹುಡುಗಿ ಇವರ ಗಲ್ಲ ಹಿಡಿದು 'ಛೀ ಕಳ್ಳ' ಅಂತು ಇವರಿಗೆ, ಹೆಹ್ಹೆಹ್ಹೆಹ್ಹೆಹ್ಹೆ ಪರಮಾನಂದವಾಗಿಬಿಡ್ತು ...ಹಂಗಂತ,ಹ್ವಾಯ್,ಆ ಹುಡುಗರಿಗೆ ನನ್ನ ಕಂಡರೆ ಮತ್ತೂ ಅಕ್ತರಾತಿ. ಅದಕ್ಕೇ ಅಲ್ಲವೋ ಈಗ, ಬೆಕ್ಕು ಒಳಗೆ ಬಾಲ ಹೊರಗೆ ಆದದ್ದು ?... ಆ ಹುಡುಗರು ಹನುಮ ನಾಯಕನ ಜತೆಗೂ ಆಡತಾವಲ್ಲ ಅಂತ ಹೊಟ್ಟೆ ಕಿಚ್ಚು ನಮ್ಮ ದಣಿಗಳಿಗೆ....ಇವತ್ತು ಕರೆದರಪ್ಪ. 'ಎಲಾ, ಹನುಮನಾಯ್ಕ ಇವತ್ತಿಂದ ಯಾ ಪ್ರಕಾರ ಗೊತ್ತುಂಟೋ' ಅಂದರು, 'ಗೊತ್ತಿಲ್ಲ ದಣಿ' ಅಂದೆ. 'ಹುಡುಗರು ಒಳಕ್ಕೆ ನೀನು ಹೊರಕ್ಕೆ' ಅಂದರು...ಹಾಗಾಗಿ ಹನುಮಪ್ಪ ಹೊರಗೆ !....

ಅರಮನೆ ಒಳಗಿಂದ ರಾಕ್ಷಸನೂ ಹುಡುಗರೂ ಬರುತ್ತಾರೆ.

ಹನುಮ : ಅಕಾ ಅಕಾ....ಮೊನ್ನೆಯಿಂದ ಒಂದು ಹೊಸಾ ಉಪದ್ವ್ಯಾಪ ಮಾರಾಯ್ರೆ ಈ ಹುಡುಗರು ಅದ್ಯಾವುದೋ ವಯಸ್ಕ ಶಿಕ್ಷಣ ಅಂತೆ. ಆ ಪುಸ್ತಕ ಸ್ಲೇಟು ತಂದು ನಮ್ಮ ದಣಿಗಳಿಗೆ ಓದುಬರಾ ಕಲಿಸಲಿಕ್ಕೆ ಸುರುಮಾಡಿ ಬಿಟ್ಟಿವೆ ! ....ಅಕಾ...ಅಕಾ

ರಾಕ್ಷಸನ ಕೈಯಲ್ಲಿ ಸ್ಲೇಟು ಪುಸ್ತಕ—ಹುಡುಗರು ಕಲಿಸುತ್ತಾರೆ—ಎಲ್ಲಾ ಕುಣಿತವಲ್ಲೇ—

ಹುಡುಗರು : (ಕೆಲವರು) ಕಕಾ ಕಿಕೀ ಕುಕೂ ಕೆಕೇ....

ರಾಕ್ಷಸ : (ಪುನರುಚ್ಚರಿಸುತ್ತಾನೆ)

ಹುಡುಗರು : (ಕೆಲವರು) ಕ ಗುಡುಸಿ ಕಿ—ಉದ್ದ ಎಳದ್ರೆ ಕೀ....
ರಾಕ್ಷಸ : (ಪುನರುಚ್ಚಾರ)
ಹುಡುಗರು : (ಕೆಲವರು) ಕ ಕೊಂಬು ಕು—ಉದ್ದ ಎಳದ್ರೆ ಕೂ....
ರಾಕ್ಷಸ : (ಪುನರುಚ್ಚಾರ)
ಹುಡುಗರು : (ಕೆಲವರು) ಕಕೇತ್ವಕೇ ಕಕೈತ್ವ ಕೈ, ಕಕೋತ್ವ ಕೋ ಕಕೌತ್ವಕೌ ....
(ಕೆಲವರು) ಉದ್ದ ಎಳದ್ರೆ–ಕೇ ಕೋ....
ರಾಕ್ಷಸ : (ಪುನರುಚ್ಚಾರ)
ಹುಡುಗರು : ಕಕ್ಕೆ ಸೊನ್ನೆ ಕಂ, ಕ ವಿಸರ್ಗ ಕಃ....
ರಾಕ್ಷಸ : (ಪುನರುಚ್ಚಾರ) (ಕಃ ಎನ್ನಲು ಹ್ಹಹ್ಹ ಎನ್ನುತ್ತಾನೆ.)
ಹುಡುಗರು : (ಕೆಲವರು) ಹಹ್ಹ ಅಲ್ಲ, ಕಃ...
ರಾಕ್ಷಸ : ಹಹ್ಹ ಅಲ್ಲ, ಕಃ....
ಹುಡುಗರು : (ಕೆಲವರು) ಕಂ ಕಃ ಕಂ....ಅಂಕಲ್ ನೀನೂ ಕಂ....

ಇತ್ಯಾದಿ ಆಡುತ್ತಿರುವಾಗ ಸೈರನ್ ಕೂಗು. ಹುಡುಗರೆಲ್ಲ ಗಲಿಬಿಲಿಯಿಂದ ಹೊರಡಲು ತೊಡಗುತ್ತಾರೆ...

ಹುಡುಗರು : ಅಂಕಲ್ ಜಯಂಟ್ ಬೈ ಬೈ....ಜಯಂಟ್ ಮಾವಾ ಬೈಬೈ....

ಇತ್ಯಾದಿ ಹೇಳುತ್ತ ನಿಷ್ಕ್ರಮಿಸುತ್ತಾರೆ. ರಾಕ್ಷಸ ಹಹಹ್ಹ ಹಿಹ್ಹಿಹ್ಹಿ ಎನ್ನುತ್ತ, ಕಲಿತ ಪಾಠವನ್ನು ಉರುಹಾಕಿಕೊಳ್ಳುತ್ತ, ಅರಮನೆ ಕಡೆ ಹೋಗಿ ನಿಷ್ಕ್ರಮಿಸುತ್ತಾನೆ. ಅನಂತರ, ಒಳಗಿನಿಂದ ಅವನ ಗರ್ಜನೆ.

ಹನುಮ : ಹುಡುಗರು ಹೊರಕ್ಕೆ, ಇನ್ನು ಹನುಮನಾಯ್ಕ ಒಳಕ್ಕೆ....(ರಾ.ಗೆ-ಕೂಗಿ) ಬಂದೆ ದಣೀ...ರಂಗ ಹತ್ತಿ ಒಳಕ್ಕೆ ಹೋಗುತ್ತಾನೆ.

* * * *

ಮುದುಕ ಮೇಷ್ಟ್ರು ಸಿಸ್ಟರ್ ಪ್ರವೇಶ

ಮೇಷ್ಟ್ರು : (ತಟ್ಟನೆ) ಮೇಡಮ್ಮ, ನಿಲ್ಲು....ಇಗೋ ಇಗೋ, ಇಲ್ಲೇ ಎಲ್ಲೋ ಇದೆ, ಅರಮನೆ !.... ಹಾಗಂತ್ಹೇಳಿ, ನನ್ನ ಕಣ್ಣು ಮಸುಕು ...ಸುಡುಗಾಡು ಸುಂಟಿ, ನಿಮ್ಮ ಕಣ್ಣುಗಳು ಕೂಡಾ ಹಾಗೇನೇನೇ—ಈ ಎಳೇ ಪ್ರಾಯ ದಲ್ಲೇ...ಇಗೋ ಇಗೋ, ಕಣ್ಣು ಮಸುಕಾಗಿದ್ರೂನೂವೇ ಮೂಗಿಗೆ

ಬಡೀತಾ ಇದೆ ನೋಡು, ಕಿವಿ ತಾನಾಗೇ ನಿಮಿರಿಕೊಳ್ಳುತ್ತಲ್ಲಮ್ಮಾ...
ಕರೀಕಲ್ಲು ಗೋಡೆ, ದುಂಡು ದುಂಡು ಬತೇರಿ–ಕಾಣಿಸಬೇಕಿತ್ತು, ಇಲ್ಲೇನೇ
ಕಾಣಿಸೋದಿಲ್ಲವಲ್ಲಾ...ಹಾಗಂತಂದ್ಹೇಳಿ....

ಸಿಸ್ಟರ್ : ಸುಮ್ನಿರಿ ಸಾರ್, ನಾ ಅದನ್ನೆಲ್ಲ ನಂಬೋಲ್ಲ...

ಮೇಷ್ಟ್ರು : ನಂಗೂ ಅನ್ನಿಸತ್ತಮ್ಮಾ, ಕಾಣದಿದ್ದನ್ನ ನಂಬಬಾರದು ಅಂತಾನೇನೇನೇ
... ಆದ್ರೆ, ಸುಡುಗಾಡು ಸುಂಟಿ, ಈ ನಂಬಿಕೆ ಅಂಬೋದು ನಾವು
ತಂದ್ಕೊಳ್ಳೋದಲ್ಲ, ತಾನೇ ಬಂದು ಕೊಂಡದ್ದು....ನಂಬಿಕೆ ಇಲ್ಲಾಂತಾ
ನೇನೇನೇ ಹೇಳೋದಾದ್ರೆ ಏನಮ್ಮಾ, ಈ ಮುದುಕನ ಜತೆ ನೀನು ಈ
ದೂರ ಬರತಿದ್ಯಾ ?

ಸಿಸ್ಟರ್ : ನಾ ಬಂದದ್ದು ಕೇಳಿ ಸರ್—ಊರಲ್ಲೆಲ್ಲಾ ಇದೇ ಸುದ್ದಿ....ಎಲ್ಲಾರೂ
ನಮ್ಮನ್ನ ಕೇಳೋರೇ. ಹುಡುಗರು ದಿನಾ ಸಂಜೆ ಎಲ್ಲಿ ಹೋಗ್ತವೆ ? ಅವು
ರಾಕ್ಷಸನ ಮನೆಗೆ ಆಡೋಕೆ ಹೋಗ್ತಾವಂತೆ ಹೌದಾ ? ರಾಕ್ಷಸ, ಅರಮನೆ
ಇದೆಲ್ಲಾ ನಿಜಾನಾ ?—ಅಂತ ಎಲ್ಲಾ ಕೇಳ್ತಾರೆ....

ಮೇಷ್ಟ್ರು : ಅಲ್ಲ, ಹಾಗಂತ್ಹೇಳಿ—ಅದೇನೇನೇನೇ...

ಸಿಸ್ಟರ್ : ಇವತ್ತು ನಾವು ಚೀಫ್‌ನ ನೋಡೋಕೆ ಹೋಗಿದ್ದೆವು. ಅವರು ಸರಿ
ಯಾಗೆ ಹೇಳಿದರು—ಹುಡುಗರು ಅವುಗಳ ವಯಸ್ಸಿಗೆ ಸರಿಯಾಗಿ ಏನೋ
ಕತೆ ಕಟ್ಟಿ ಹೇಳತವೆ. ಹಾಗಂತ ನೀವು ದೊಡ್ಡೋರು ಯೋಚ್ನೆ ಮಾಡ
ಬೇಡವಾ ಅಂದರು. ಸೈಂಟಿಫಿಕ್ ಆಗಿ ಯೋಚಿಸೋದನ್ನ ಕಲಿತುಕೊಳ್ಳಿ
ಅಂದರು. ರಾಕ್ಷಸಗೀಕ್ಷಸ ಅಂತ ಹುಡುಗರು ತಮಾಷೆ ಮಾಡಿರಬಹುದು.
ಅಥವಾ ಅವಕ್ಕೆ ಯಾವಾಗ್ಲೂ ಆಟದ್ದೇ ಕನಸಲ್ವಾ, ಅದೇ ಕನಸಿನ ಆಟ
ನಂಬ್ಕೊಂಡು ಕತೆ ಹೇಳಿರಬಹುದು. ಅದಕ್ಕೆ ಊರಲ್ಲಿರೋ ದೊಡ್ಡೋರೆಲ್ಲ
ಯಾಕೆ ಹಾಗೆ ತಲೆಕೆಡಿಸ್ಕೋಬೇಕು—ಅಂದರು.

ಮೇಷ್ಟ್ರು : ಹಾಗಿದ್ರೂ ಕೂಡಾ ನೂನೂನೂವೇ....

ಸಿಸ್ಟರ್ : ನಿಮಗೂ **ಈ** ಭ್ರಮೆ ಇವತ್ತಿಗಾದರೂ ಹರಿದು ಹೋಗಲಿ ಅಂತಾನೆ
ನಾನು ಬಂದೆ, ನಿಮ್ಮ ಜತೇಗೆ...

ಮೇಷ್ಟ್ರು : ಸುಡುಗಾಡು ಸುಂಟಿ, ಹುಟ್ಟುತಾ ಬಂದ ಭ್ರಮೆ ಹರಿಯೋದು ಈ ಘಟ ಸುಟ್ಟು ಹೋದಮೇಲೇನೇನೇ....ಹಾಗಂತಂದ್ವೇಳಿ...

ಸಿಸ್ಟರ್ : ಆಯ್ತು ಸರ್, ಗೊತ್ತಾಯಲ್ಲ ಭ್ರಮೆ ಅಂತ...ನಡೀರಿ, ಇನ್ನಾದ್ರೂ ಹೋಗೋಣ.... (ಗಡಿಯಾರ ನೋಡಿ ಕೊಂಡು) ಎಷ್ಟು ಹೊತ್ತಾಗಿ ಬಿಡ್ತು...

ಅಷ್ಟರಲ್ಲಿ ಹನಂಮ— ಗಹಗಹಿಸಿ ನಗುತ್ತ ಪ್ರವೇಶಿಸುತ್ತಾನೆ. ಆಮೇಲೆ ಮೇಷ್ಟ್ರು ರನ್ನು ಕಂಡು ತಟ್ಟನೆ ತಿರುಗಿ ನಿಷ್ಕ್ರಮಿಸುತ್ತಾನೆ. ಮೇಷ್ಟ್ರು ಅವನು ಹೋದಕಡೆಗೇ 'ಅಲೆ! ಆಲೆ!' ಎನ್ನುತ್ತ ಹಿಂಬಾಲಿಸುತ್ತಾರೆ. ಏನೂ ಕಾಣದ ಮೇಷ್ಟ್ರರ ಹಿಂದೆ ನಡೆದು ನಿಷ್ಕ್ರಮಿಸುತ್ತಾಳೆ. ಸ್ವಲ್ಪ ಹೊತ್ತಾದ ನಂತರ ಹನುಮನ ಪ್ರವೇಶ.

ಹನುಮ : ಎಲಾ ಮುದಿಯ !....ಅಲ್ಲ, ನಾ ಯಾಕೋ ಬಂದೆನಲ್ಲಾ....ಕಾಕೇ ಕಾಲು, ಗುಬ್ಬೀ ಗೂಡು, ಯಾಕೆ ಬಂದೆ ?....(ತಟ್ಟನೆ ಹಿಂದಿನ ಹಾಗೆ ಗಹಗಹಿಸಿ ನಗುತ್ತ) ಓಯ್, ನಿಮಗೆ ಹೇಳುವ ಅಂತ ಬಂದೆ....ನಮ್ಮ ದಣಿಗಳು ಮಾರಾಯ್ರು, ಈಗ ಈ ಹುಡುಗರಿಂದ ಕಲಿತ ಭಾಷೆ ಮಾತಾಡೋಕೆ ಪ್ರಾರಂಭಿಸಿ ಬಿಡ್ತಾರೆ ನೋಡಿ...ಅದೇ. ಬೆಳಗ್ಗೆ ಯಥಾ ಪ್ರಕಾರ ಬಂದು ಕಡಾಯದ ಕವಳಗೇಲಿ ಆಡಿನರಕ್ತ ತಗೊಂಡ್ಹೋಗಿ ಕೊಟ್ಟೆನಪ್ಪ ಕುಡಿಯೋಕೆ ಅಂತ. ಕೈ ಹೀಗೆ ಮಾಡಿದ್ರು— 'ಬಡಾ ಆನೆಗೆ ಆರು ಕೋಡು, ಬಡಾ ಆನೆಗೆ ಆರು ಕೋಡು' ಅಂತಾರೆ!...ಇದೆಲ್ಲೀ ಆನೆ, ಆನೆಗೆ ಎಲ್ಲೀ ಕೋಡು ಅಂತ ಅರ್ಧ ತಾಸು ಆಲೋಚನೆ ಮಾಡಿದ ಮೇಲೆ ಅವರ ಸನ್ನೆ ನೋಡಿ ಅರ್ಥ ಮಾಡಿಕೊಂಡೆ—ಬಡಾ ಆನೆಗೆ ಆರು ಕೋಡು—ಅಂದ್ರೆ ಬೇಡ ನನಗೆ ಹಾಲು ಕೊಡು ಅಂತ... ಹೂಂ, ರಕ್ತ ಕುಡಿಯೋಕೆ ಬಿಟ್ಟು ಹಾಲು ಕುಡಿಯೋಕೆ ಶುರು....ಈಗ ಮಾರಾಯ್ರು ಅಲ್ಲಿ ಕೂತ್ಬಿಟ್ಟಿದ್ದಾರೆ, ಗಲ್ಲಕ್ಕೆ ಕೈಕೊಟ್ಟು ಯೋಚ್ನೆ ಮಾಡ್ತಾ...ಹಾಗೆ ಯಾವತ್ತೂ ಯೋಚ್ನೆ ಗೀಚ್ನೆ ಅಂತ ಇದ್ದವರಲ್ಲಪ್ಪ...ಎದುರು ಹಾದೆ, ಕಾಣಲೇ ಇಲ್ಲ, ಹೋಗಿ ನಿಂತ್ಕೊಂಡೆ, ಸ್ವಲ್ಪ ಹೊತ್ತಿನ ಮೇಲೆ ತಲೆಯೆತ್ತಿ ನೋಡಿದ್ರು, ಅದೇ ಯೋಚ್ನೇಲೇ ಗಡ್ಡದಲ್ಲಿಟ್ಟ ಕೈ ತೆಗೆದ್ರು. ಮೂಗಿಗೆ ಬೆರಳಿಟ್ಟರು. ಹನುಮ

ನಾಯ್ಕಾ ಅಂದರು. ದಣೀ ಎಂದೆ. ಆಲೋಚ್ಸಿ ಆಲೋಚ್ಸಿ ಕೇಳಿದರು. ಹನುಮನಾಯಕ ಕರಟು ಮರಟೊ ಮರಟು ಕರಟೊ—ಅಂತ. ಏನು ಹೇಳಲಿ? ಏನು ಕೇಳಿದರು ಅಂತ ಗೊತ್ತಾದರಲ್ಲವೊ? ನಾನೂ ತಡ ಮಾಡಲಿಲ್ಲ. ತಟ್ಟನೆ ಹೇಳಿಬಿಟ್ಟೆ— ಕರಟು ಮರಟೂ ಅಲ್ಲ ಮರಟು ಕರಟೂ ಅಲ್ಲ, ಬೆಸಗೊಂಬಾತನ ತಲೆಕಾಯಿ ಗೊರಟು ದಣೀ—ಅಂದ್ಬಿಟ್ಟೆ, ಹಿಹ್ಹಿಹ್ಹಿ ಅಂತ ನಗೋಕೆ ಪ್ರಾರಂಭಿಸಿದ್ರು. ಅಲ್ಲಿಂದ ಗಾಡಿಬಿಟ್ಟೆ.... ಹೌದು ಮಾರಾಯ್ರೇ ಹುಡುಗರು ಬರೋ ಹೊತ್ತಾಯ್ತಲ್ಲ. ನಾವಿನ್ನು ಹೊರಡುವುದೇ....

ಎನ್ನುತ್ತ ಹನುಮ ನಿಷ್ಕ್ರಮಿಸುತ್ತಾನೆ. ಅನಂತರ ಹುಡುಗರು ಬರುತ್ತಾರೆ. ಆರಮನೆ ಕಡೆ ಹೋಗುತ್ತಾರೆ. ರಾಕ್ಷಸನನ್ನು ಕೂಡ ರಂಗಕ್ಕ ಬರುತ್ತಾರೆ. ಏನೇನೋ ಮಾತಾಡಿ ಕೊಳ್ಳುತ್ತ ರಾ. ನನ್ನು ಬಿಟ್ಟು, ಎಲ್ಲಾ ಚದುರಿ ವಿಂಗ್‌ಸೊಳಕ್ಕೆ ನಿಷ್ಕ್ರಮಿಸುತ್ತಾರೆ. ಈ ಹೊತ್ತಿನಲ್ಲಿ ಹನುಮ ಪ್ರೇಕ್ಷಾಂಗಣದ ಹಿಂಭಾಗದಿಂದ ಪ್ರವೇಶ.

ಹನುಮ : ಓಯ್, ಪಾಪ ನಿನ್ನೆ ಆ ಹುಡುಗರು ನನಗೆ ಎದುರಾದವು, ನನ್ನನ್ನು ಕರೆದವು ಮಾರಾಯ್ರೆ, ಇವತ್ತು ಅದೇನೋ ಗೋಕುಲಾಷ್ಟಮಿ ಆಟವಂತೆ ನೀವೂ ಬನ್ನಿ ಅಂಕಲ್ ಟ್ವಿಂಕಲ್ ಅಂದವು....ಬರ್ತೇನೆ, ಹೋಗಿ ಅಂತ ಹೇಳಿ ಬಂದ್ಬಿಟ್ಟೆ....ಅದೇನ್ ಆಟವೋ, ನಿಮ್ಮ ಜತೇನೇ ಕೂತು ನೋಡಿ ಬಿಡುವ.

ಪ್ರೇಕ್ಷಾಂಗಣದಲ್ಲಿ ಕೂರುತ್ತಾನೆ. ರಂಗದಲ್ಲಿ ಆಟವು ಪ್ರಾರಂಭ. ರಾಕ್ಷಸ ಹೆಹ್ಹೆಹ್ಹೆ ಎಂದು ಮೆಚ್ಚಿ ತಿರುಗುತ್ತ ನೋಡುತ್ತಾನೆ.

ಹುಡುಗರು : (ವಿಂಗ್‌ಗಳಿಂದ ಬೇರೆ ಬೇರೆಯಾಗಿ ಹಾಡಿಕೊಳ್ಳುತ್ತ ಹುಡುಕುತ್ತ ಪ್ರವೇಶಿಸುತ್ತಾರೆ.)

(ಹಾಡು) ನಂದನಕಂದ ಮುಕುಂದಾ ॥ ಹುಡುಕುತ್ತ ಹೊರಟೆವು ನಿನ್ನಾ ॥
ಕಾಪಾಡು ಬಾರೋ ನಮ್ಮನ್ನಾ ।....
ಕಾಳಿಂಗ ಸರ್ಪನ ವಿಷಕ್ಕೆ ನಮ್ಮ ಪಶುಗಳು ಸತ್ತವು ಕೃಷ್ಣಾ !
ಕಾಪಾಡು ಬಾರೊ ನಮ್ಮನ್ನಾ ॥...
ಕೊಳಲು ಹಿಡಿದವನೇ ಬಾರೂ ॥ ನವಿಲುಗರಿ ಮುಡಿದವನೇ ಬಾರೋ ॥

ಕಾಪಾಡು ಬಾರೊ ನಮ್ಮಣ್ಣಾ ।....

ಈಗ ಜೇನಿ ಕೃಷ್ಣನಾಗಿ, ರಂಗಕೇಂದ್ರಕ್ಕೆ ಪ್ರವೇಶಿಸುತ್ತಾಳೆ.

ಎಲ್ಲರಿಗೂ ಅಭಯಹಸ್ತ ತೋರಿಸಿ, ಕಾಳಿಂಗನ ಹೆಡೆಯನ್ನು ಹತ್ತಿ ಕುಣಿಯುವಂತೆ ನಟಿಸುತ್ತಾಳೆ.

ಹುಡುಗರು : (ಹಾಡು) ಆಡಿದನೋ ರಂಗಾ । ಅದ್ಭುತದಿಂದಲಿ । ಕಾಳಿಂಗನ ಫಣಿ ಯಲಿ...

ದುಷ್ಟ ಕಾಳಿಂಗನ ಇಷ್ಟಗಲ ಹೆಡೆಯಲ್ಲಿ ॥

ಪುಟ್ಟ ಪಾದಗಳಿಟ್ಟು ತುಳಿದನು ನೆಲದಲ್ಲಿ ಆಡಿದನೋ....

ಹಾಡು ಮುಗಿಸಿ ಹುಡುಗರು ಭಜಿಸತೊಡಗುತ್ತಾರೆ–

ಹುಡುಗರು : ಮುಕುಂದ ಜಯ ಜಯ । ಮುರಳೀಧರ ಜಯ...

ಮೊದಲು ಹೆಹ್ಹೆಹ್ಹೆ ಹಿಹ್ಹಿಹ್ಹಿ ಎಂದು ಮೆಚ್ಚಿಕೊಂಡು ನೋಡುತ್ತ ನಿಲ್ಲುವ ರಾಕ್ಷಸ ಕ್ರಮೇಣ ಅವರ ಆಟದಲ್ಲಿ ಕೂಡಿಕೊಳ್ಳುತ್ತಾನೆ. ತುದಿಗಂತೂ ಭಜನೆಯಲ್ಲಿ ತೀರಾ ತನ್ಮಯನಾಗಿ ಜೇನಿಯ ಎದುರು ನಿಂತು ಭಜಿಸುತ್ತ ತಟ್ಟನೆ ಅವಳ ಕಾಲಿಗೆ ಎರಗುತ್ತಾನೆ. ಆಕೆಯ ಕಾಲಿಗೆ ರಾಕ್ಷಸನ ತಲೆ ತಾಗಿ ಆಕೆ ಮುಗ್ಗರಿಸಿ, ಧೊಪ್ಪನೆ ಬಿದ್ದು ನರಳುತ್ತಾಳೆ. ಹುಡುಗರೆಲ್ಲ ಗಾಬರಿಗೊಂಡು ಅವಳ ಸುತ್ತ ಜಮಾಯಿಸುತ್ತಾರೆ. ಆಕೆ ನೋವಿನಿಂದ ನರಳುತ್ತಾಳೆ. ರಾಕ್ಷಸ ಏನೂ ತೋಚದೆ ದಿಙ್ಮೂಢನಾಗಿ ನಿಲ್ಲುತ್ತಾನೆ.

ಹನುಮ : ಅಯ್ಯೋ, ಆ ಹುಡುಗಿ ಬಿದ್ದೇಬಿಟ್ಟಳಲ್ಲ !

ಎನ್ನುತ್ತ ಪ್ರೇಕ್ಷಾಂಗಣದಿಂದ ಆತನೂ ಧಾವಿಸುತ್ತಾನೆ.

ಹುಡುಗರು : ಭಾರೀ ಪೆಟ್ಟಾಗಿ ಬಿಟ್ಟಿದೆ...ಕಾಲು ಉಳುಕಿ ಹೋಗಿರಬೇಕು...ಅಲ್ಲ, ಬೆನ್ನಿಗೇ ಪೆಟ್ಟು ಬಿದ್ದಿದೆ....ಏಳೋಕೇ ಆಗೋದಿಲ್ಲ....ಏನು ಮಾಡೋದು ಈಗ ?...ಮೆಲ್ಲಗೆ ಅವಳನ್ನು ಎಬ್ಬಿಸಿ ಕರಕೊಂಡು ಹೋಗೋಣ.... ಏಳೋಕೆ ಮಾಡ್ತಿದಾಳೆ, ಆಗೋದಿಲ್ಲ...ಎಲ್ಲಾ ಸುಮ್ನಿರಿ, ನಾನು ಬೇಗ ಹೋಗಿ ನನ್ನ ತಂದೇಗೆ ಹೇಳಿ ಜೀಪ್ ತಗೊಂಡು ಬರ್ತೇನೆ-ಅದರಲ್ಲಿ ಕರಕೊಂಡು ಹೋಗೋಣ .... ನಾವೇ ಹೊತ್ಕೊಂಡು ಹೋಗಿಬಿಡ ಬಹುದು ಇತ್ಯಾದಿ–

ಹನುಮ : ಸುಮ್ನಿರಿ, ಏನೂ ಬೇಡ. ನಾನು ಅವಳನ್ನು ಮೆಲ್ಲಗೆ ಎತ್ಕೊಂಡು ಬರ್ತೇನೆ. ನಡೀರಿ, ಎಲ್ಲಾ ಹೋಗೋಣ.

ಹನುಮ ಆಕೆಯನ್ನು ಮೆಲ್ಲ ಎತ್ತಿಕೊಳ್ಳುತ್ತಾನೆ. ಆಕೆ ನರಳುತ್ತಿದ್ದಾಳೆ. ಎಲ್ಲಾ ನಿಷ್ಕ್ರಮಿಸುತ್ತಾರೆ. ಒಬ್ಬನೇ ಉಳಿದ ರಾಕ್ಷಸ ಆ ಕಡೆಗೇ ನೋಡುತ್ತ ನಿಂತಿದ್ದು ಆಮೇಲೆ ಅಸ್ವಸ್ಥನಾಗಿ ಅಲ್ಲೆಲ್ಲಾ ಸುತ್ತುತ್ತಾನೆ. ಗರ್ಜಿಸುತ್ತಾನೆ: ರಂಗದ ಮಧ್ಯದಲ್ಲಿ, ನಿಧಾನವಾಗಿ ಕೂತು ಭಜನೆ ಮಾಡತೊಡಗುತ್ತಾನೆ.

ರಾಕ್ಷಸ : ಮೂಗುದ್ದ ಝೋ ಝೋ ॥ ಮುಳು ಮುಳು ಝೋ ಝೋ....

ಸ್ವಲ್ಪ ಹೊತ್ತಿನ ಮೇಲೆ ಹನುಮ ಪುನಃ ಪ್ರವೇಶಿಸುತ್ತಾನೆ. ರಾಕ್ಷಸ ಸುದ್ದಿ ತಿಳಿಯಲು ಕುತೂಹಲದಿಂದ ಮೇಲೇಳುತ್ತಾನೆ.

ಹನುಮ : ಏನೆಂದರೂ ಪಡಪೋಶಿ ಆಗ್ಹೋಯ್ತು, ದಣಿಗಳೇ .... ಅವಳನ್ನ ಹೊತ್ಕೊಂಡು ಅವಳ ಮನೆಗೇ ಹೋದೆವು. ನೋವಿನಿಂದ ಪಾಪ, ನರಳ್ತಾನೇ ಇತ್ತು. ಮನೆಯವರು ನೋಡಿ ಏನು ಮಾಡಲಿಕ್ಕೂ ತೋಚದೆ ಆಸ್ಪತ್ರೆಗೆ ತಗೊಂಡು ಹೋದರು. ಅಲ್ಲಿ ವೈದ್ಯರು ತುಂಬಾ ಹೊತ್ತು ಪರೀಕ್ಷೆ ಮಾಡಿ, ಇದು ಬಹಳ ಕಷ್ಟ, ಇಲ್ಲಿ ಆಗೋದಿಲ್ಲ, ದೂರದ ನಗರ ದಲ್ಲಿರೋ ದೊಡ್ಡಾಸ್ಪತ್ರೇಗೇ ಕರಕೊಂಡು ಹೋಗಬೇಕು-ಅಂದರಂತೆ, ಅದೇನೋ ಬೆನ್ನುಹುರಿಯಲ್ಲಿ ಉಂಗುರ ಜಾರಿಬಿಟ್ಟಿದೆಯಂತೆ. ಅದಕ್ಕೆ ಅದೆಂತದೋ ಚಿಕಿತ್ಸೆ....ಹುಂ, ತತ್ರಚಿಕಿತ್ಸೆ ಆಗಬೇಕಂತೆ, ಅದೂ ಸಾಮಾನ್ಯದ್ದಲ್ಲ, ದೊಡ್ಡ ತತ್ರಚಿಕಿತ್ಸೇನೇ ಆಗಬೇಕಂತೆ, ಹಾಗಾದರೂ ಗುಣವಾದೀತು ಅಂತ ಹೇಳೋದು ಕಷ್ಟ—ಅಂದ್ರಂತೆ... ನಾನೂ ಆಸ್ಪತ್ರೆ ಹತ್ತಿರ ಹೋಗಿದ್ದೆ. ಹುಡುಗರೆಲ್ಲ ಅಲ್ಲೇ ಸುತ್ತುತ್ತ ಇದ್ದವು. ನಾನು ತಡಮಾಡಬಾರದು ದಣಿಗಳಿಗೆ ತಿಳಿಸಬೇಕೂ ಅಂತ ತತ್‌ಕ್ಷಣವೇ ಬಂದು ಬಿಟ್ಟೆ...

ರಾಕ್ಷಸ ದಿಕ್ಕು ತೋರದೆ ಆಚೀಚೆ ಶತಪಥ ಹಾಕುತ್ತಾನೆ. ದುಃಖದಿಂದ ಗರ್ಜಿಸಿ, ನಿಟ್ಟುಸಿರು ಬಿಡುತ್ತಾನೆ.

ಹನುಮ : (ವಿಂಗ್ ಕಡೆಗೆ) ಏಯ್, ದಣಿಗಳಿಗೆ ಶೋಕ ಉಕ್ಕುತಾ ಉಂಟು... ಪಿಟೀಲಿನವನೆ....ಬೇಗ....

ಪಿಟೀಲು ಮತ್ತು ಮೃದಂಗದವರು ಬಂದು ಬಾರಿಸುತ್ತಾರೆ. ರಾಕ್ಷಸ ಶೋಕವನ್ನು ಅಭಿನಯಿಸಿ ಕುಣಿಯುತ್ತಾನೆ. ಆಮೇಲೆ ಯೋಚನಾಮಗ್ನನಾಗಿ ಕೂರುತ್ತಾನೆ—ಸ್ವಲ್ಪ ಹೊತ್ತಿನ ನಂತರ—

ರಾಕ್ಷಸ : (ತಟ್ಟನೆ ಕಣ್ಣು ಹೊಳೆಸಿ) ಸಾಮಾ....ಸಾಮಾ...

ಹನುಮ : ಸಾಮ ಒಂದೇ ಅಲ್ಲ, ಸಾಮದಾನ ಭೇದ ದಂಡ ಅಂತ ನಾಲ್ಕು ಚತುರೋಪಾಯಗಳು !

ಹಾಗಲ್ಲ ಎನ್ನುವಂತೆ ರಾಕ್ಷಸ ತಲೆಯಲ್ಲಾಡಿಸುತ್ತಾನೆ. ಹನುಮನನ್ನು ಸಂಜ್ಞೆಯಿಂದ ಹತ್ತಿರಕ್ಕೆ ಕರೆಯುತ್ತಾನೆ.

ಹನುಮ : ಹೌದಾ ? ಗುಟ್ಟಾ ?........

ಎನ್ನುತ್ತಾ ರಾಕ್ಷಸನ ಹತ್ತಿರ ಹೋಗುತ್ತಾನೆ. ರಾಕ್ಷಸ ಹನುಮನ ಕೈಹಿಡಿದು, ಅಭಿನಯಿಸುತ್ತಾ, ಬೆರಳುಗಳಲ್ಲಿ ಅವನ ಅಂಗೈ ಮೈ ಮುಟ್ಟಿ ಆ ಮೂಲಕ ಕುಣಿತ ಅಭಿನಯಗಳಿಂದ ವಿಷಯ ವಿವರಿಸುತ್ತಾನೆ.

ಹನುಮ : (ಹೌದಯ್ಯಾ ಇದು ಬೆರಳಿನ ಭಾಷೆ—ನನಗೆ ಮತ್ತು ನಮ್ಮ ದಣಿಗಳಿಗೆ ಮಾತ್ರ ತಿಳಿಯೋದು. (ರಾ.ನಿಗೆ) ತಿಳೀತು, ದಣಿಗಳೇ, ಸರಿಯಾಗಿ ತಿಳಿದುಕೊಂಡೆ. ಬೇಕಾದರೆ ಇನ್ನೊಂದು ಸಲ ಹೇಳಿಬಿಡ್ತೇನೆ. ಕೇಳಿಬಿಡಿ, ಸರಿಯೋ ಅಂತ... ಇಕೋ, ಈ ತಕ್ಷಣ ನಾನು ಹೊರಟುಬಿಡ್ಬೇಕ್....ಇಲ್ಲಿಂದ ಉತ್ತರ ದಿಕ್ಕಿನಲ್ಲಿ ಏಳು ನದಿಗಳನ್ನು ದಾಟಿ ಏಳು ಯೋಜನಾ ದೂರ ಮನೋವೇಗದಲ್ಲಿ ಧಾವಿಸಿ ಹೋಗಬೇಕ್....ಅಲ್ಲಿ ಶಾಲ್ಮಲೀ ನದೀ ತೀರದಲ್ಲಿರುವ ಅಲಕಾರಣ್ಯವನ್ನು ಪ್ರವೇಶಿಸಬೇಕ್.... ಅರಣ್ಯದ ನಡುವೆ ಇರತಕ್ಕಂಥಾ ಕಿರು ಬಯಲನ್ನು ಸೇರ್ಬೇಕ್.... ಆ ಕಿರು ಬಯಲಿನಲ್ಲಿ ಯಾವ ಏಳು ವಟವೃಕ್ಷಗಳಿದ್ದಾವೆ, ಅವುಗಳನ್ನು ಸಮೀಪಿಸಬೇಕ್...ಏಳರಲ್ಲಿ ನಟ್ಟ ನಡುವೆ ಇರುವ ವಟವೃಕ್ಷಕ್ಕೆ ಏಳುಕೊಂಬೆ ; ಅದರ ನಡುವಣ ಕೊಂಬೆಯಲ್ಲಿ ಒಂದು ಪೊಟರೆಉಂಟು ; ಆ ಪೊಟರೆಗೆ ಮುಖಮಾಡಿ 'ಜೈ ಕಂಕಲಾಸುರ' ಎಂದ ತಕ್ಷಣ ಒಂದು ಕೆಂಪು ಪಾರಿವಾಳ ಹೊರಕ್ಕೆ ಬರ್‍ತದೆ....ಅದನ್ನ ಅಂಗೈಯಲ್ಲಿ ಹಿಡಿದದ್ದೇ ಮುಂಗೈ ಮೇಲೆ ಕೂರಿಸಿಕೊಂಡು ಇಲ್ಲಿಗೆ ತರಬೇಕ್...ಆಮೇಲೆ ಯಾರಿಗೂ ಕಾಣದಂಥ ಪರಿಯಲ್ಲಿ ಆಸ್ಪತ್ರೆಯನ್ನು ಪ್ರವೇಶಿಸಿ ಆ ಪಾರಿವಾಳವನ್ನು ಕೊಯ್ದು ಅದರ ರಕ್ತವನ್ನು ಆ ಹುಡುಗಿಯ ಬೆನ್ನಿಗೆ ಹಚ್ಚಬೇಕು .... ಅಲ್ಲವೋ ದಣಿಗಳೇ ?...

ರಾಕ್ಷಸ ಹೌದು ಎಂದು ತಲೆಯಾಡಿಸುತ್ತಾನೆ.

ಹನುಮ : ಇಕೋ ದಣಿಗಳೇ, ಹೊರಟೇಬಿಟ್ಟೆ.

ಹನುಮ ನಿಷ್ಕ್ರಮಿಸುತ್ತಾನೆ. ಆಮೇಲೆ ರಾಕ್ಷಸ ಗರ್ಜಿಸುತ್ತಾನೆ. ಅದನ್ನು ಕೇಳಿ ಹನುಮ ಮತ್ತೆ ಹಿಂತಿರುಗುತ್ತಾನೆ.

ಹನುಮ : ಮತ್ತೆ ಯಾಕೋ ಬಂತಲ್ಲಪ್ಪ, ಬುಲಾವ್....ಕರೆದಿರಾ ದಣಿಗಳೇ ?

ರಾಕ್ಷಸ : (ಅಭಿನಯ ಸಮೇತ – ಗರ್ಜನೆ)

ಹನುಮ : ಆಂ ? ಹಕ್ಕಿಗಳು ಏನು ಮಾಡ್ತವೆ ಅಂದಿರಾ ? ಹಕ್ಕಿಗಳು ಏನು ಮಾಡ್ತವೆ, ಮರದ ಮೇಲೆ ಗೂಡು ಕಟ್ಟಿ ವಾಸ ಮಾಡ್ತವೆ.

ರಾಕ್ಷಸ : (ಪುನಃ ಅಭಿನಯ–ಗರ್ಜನೆ)

ಹನುಮ : ಮತ್ತೇನು ಮಾಡ್ತವೆ ಅಂತಲೋ ? —ಗೂಡು ಬಿಟ್ಟು ಆಕಾಶಕ್ಕೆ ಜಿಗೀತವೆ. ನೀಲಿಯಲ್ಲಿ ಸ್ವಚ್ಛಂದ ಹಾರಾಡ್ತಾ ನಡೆದು ಬಿಡ್ತವೆ, ಲೋಕ ಲೋಕಾಂತರವನ್ನೇ ಕಾಣ್ತಾ.

ರಾಕ್ಷಸ : ಹಾಂ !...ಅಕ್ಕಿ, ಅಕ್ಕಿ ! ಆರಿಬಿಡಬೇಕು ಕಾಂತರಕಾಂತರಕ್ಕೆ !

ಹನುಮ : ನೀವೂ ಹಾರಿಬಿಡ್ತೀರಾ, ಲೋಕ ಲೋಕಾಂತರಕ್ಕೆ ? (ತನ್ನಲ್ಲೇ ನೀವು ಹಾರಲಿಕ್ಕೆ ಹೊರಟರೆ ಹಾರುವುದಿಲ್ಲ, ನೀವೇ ಹೇಳಿದ ಹಾಗೆ, ಆರಿ ಹೋಗ್ತೀರಿ ಅಷ್ಟೆ ತಣ್ಣಗೆ !...(ರಾ. ಗೆ) ದಣಿಗಳ ಇಚ್ಛೆ ಹಾಗಿದ್ದರೆ, ನಾನಾದರೂ ಏನು ಹೇಳಲಿ ? ಅಷ್ಟಕ್ಕೆ ಮತ್ತೆ ಕರೆದದ್ದೇ ?....ಸರಿ, ಇನ್ನು ತಡಮಾಡಲಿಕ್ಕಿಲ್ಲ, ನಾನು ಹೊರಟುಬಿಡ್ತೇನೆ,

ಎಂದು ನಿಷ್ಕ್ರಮಿಸುತ್ತಾನೆ. ರಾಕ್ಷಸ ಆನಂದೋದ್ರೇಕದಿಂದ ಹಾಡಿಕೊಳ್ಳುತ್ತ ಕುಣಿದು ಕೊಳ್ಳುತ್ತ ಅರಮನೆ ಕಡೆ ನಡೀತಾನೆ.

ರಾಕ್ಷಸ : ಅಕ್ಕಿ ಅಕ್ಕಿ...ಕಾಂತಾರಕಾಂತಾರ ಆರಿಬಿಡಬೇಕು....

* * * *

ಸ್ವಲ್ಪ ಹೊತ್ತಿನ ಮೇಲೆ ಪುನಃ ರಾಕ್ಷಸನ ಪ್ರವೇಶ ; ಅದೇ ಆನಂದೋದ್ರೇಕದಲ್ಲಿ ಹಾಗೇ ಹಾಡಿಕೊಳ್ಳುತ್ತ ಕುಣಿಯುತ್ತ ಬರುತ್ತಾನೆ.

ರಾಕ್ಷಸ : ಅಕ್ಕಿ ಆರಿಬಿಡಬೇಕು....ಆಕಶಾ ಆರಿಬಿಡಬೇಕು...

(ಹಾಗೆ ಕುಣಿಯುವಾಗ ಯಾರೋ ಗಂಟಲು ಹಿಡಿದ ಹಾಗೆ ಭಾಸವಾಗಿ ನೋವು

ಅನುಭವಿಸುತ್ತ ತತ್ತರಿಸಿ ಧೊಪ್ಪನೆ ಕೂಡುತ್ತಾನೆ. ನಿಶ್ಚೇತನನಾಗುತ್ತಾನೆ. ಒಡನೆಯೇ ಹನುಮನ ಪ್ರವೇಶ)

ಹನುಮ : ಆಗಿ ಹೋಯ್ತು ದಣಿಗಳೇ — ಎಲ್ಲಾ ಮುಗಿದುಹೋಯ್ತು. ನೀವು ಹೇಳಿದ ಹಾಗೇ ಮಾಡಿಬಿಟ್ಟೆ. ಕೆಂಪು ಪಾರಿವಾಳ ಕೊಯ್ದು ಬಿಸಿರಕ್ತ ಬೆನ್ನಿಗೆ ಸವರಿದ್ದೇ ತಡ, ಆ ಹುಡುಗಿ ಹುಷಾರಾಗಿ ಎದ್ದು ಕೂತುಬಿಟ್ಟಿತು! ...(ರಾ.ನನ್ನು ನೋಡಿ) ಅಲೆ!....(ಹತ್ತಿರ ಹೋಗಿ) ದಣಿ! ದಣಿಗಳೇ! (ಮುಟ್ಟುವನು ; ರಾಕ್ಷಸನ ಶವ ದೊಪ್ಪನೆ ಮಲಗಿದ ಹಾಗೆ ಕೆಳಕ್ಕೆ ಬೀಳುತ್ತದೆ.) ಆಂ?...ದಣಿಗಳು ಸತ್ತುಹೋದರು ?... ಸತ್ತು ಹೋದರು! (ಆನಂದದಿಂದ) ದಣಿಗಳು ಸತ್ತು ಹೋದರು! ಹಾಗಾದರೆ ನಾನೂ ಸತ್ತು ಹೋಗಬಹುದು ! (ಹುಚ್ಚಾಪಟ್ಟೆ ಖುಷಿಯಿಂದ ಕುಣಿಯುತ್ತಾನೆ.) ನಾನೂ ಸತ್ತು ಹೋಗಬಹುದು. ಹೋಮ್, ನಾನೂ ಸತ್ತು ಹೋಗ್ತೇನೆ ....ಹಕ್ಕೀ ಹಾಗೆ ಜಿಗಿದುಬಿಡ್ತೇನೆ ... ಲೋಕ ಲೋಕಾಂತರಕ್ಕೆ ನಡೆದು ಬಿಡ್ತೇನೆ....

ಎನ್ನುತ್ತ ಕುಣಿ ಕುಣಿದು ರಾಕ್ಷಸನ ಪಕ್ಕದಲ್ಲಿ ದೊಪ್ಪನೆ ಕುಸಿದು ಬೀಳುತ್ತಾನೆ—ಸ್ವಲ್ಪ ಹೊತ್ತು ನೀರವ—ಆಮೇಲೆ ಹುಡುಗರ ಪ್ರವೇಶ. ಜೇನಿ ಇಲ್ಲ.

ಬಂಟು : ಜಯಂಟ್ ಮಾಮಾ, ಜೇನಿ ಗುಣವಾಗಿ ಬಿಟ್ಟಳು...

ಬಿಂಕು : ಡಾಕ್ಟರು ಆಸ್ಪತ್ರೆಯಿಂದ ಡಿಸ್‌ಚಾರ್ಜ್ ಮಾಡಿದ್ರು...

ಕಾಮು : ಮನೆಗೆ ಕರಕೊಂಡು ಬಂದಿದಾರೆ....

ಬಾಳ : ಹನ್ನೂ ಮಾಮಾ...

ಎಲ್ಲರೂ ತಟ್ಟನೆ ಕೆಳಗೆಬಿದ್ದಿರುವ ರಾಕ್ಷಸ, ಹನುಮನನ್ನು ನೋಡ್ತಾರೆ.

ಮೀನಿ : ಏಯ್, ಜಯಂಟ್ ಮಾಮಾ, ಹನ್ನೂ ಮಾಮಾ ಇಬ್ಬರೂ ಮಲಗಿದಾರೆ ನೋಡಿ, ನಿದ್ದೆ ಮಾಡ್ತಿದಾರೆ.

ಮಿಟ್ಟಿ : ಹೌದು. ಗಲಾಟೆ ಮಾಡಬೇಡಿ, ಪಾಪ, ನಿದ್ದೆಮಾಡ್ತಿದಾರೆ.

ಜಟ್ಟಿ : ಹೌದು. ಗಲಾಟೆ ಮಾಡಬೇಡಿ, ನಿದ್ದೆ ಮಾಡ್ತಿದಾರೆ....

ಚೆನ್ನ : ಆಮೇಲೆ ಮತ್ತೆ ಬರೋಣ ಹೇಳೋದಕ್ಕೆ...

ಚೇರ : ಇವತ್ತೆಲ್ಲಾ ನಿದ್ದೆ ಮಾಡಲಿ. ನಾಳೆ ಬರೋಣ....

ಚೆಟ್ಟಿ : ಹೌದು. ನಾಳೆ ಜೇನೀನೂ ಬರ್‍ತಾಳೆ. ಎಲ್ಲಾ ಬರೋಣ. ನಾಳೆಯಿಂದಾ ಮತ್ತೆ ಆಟ ಆಡಬಹುದು—

ವಿಟ್ಟಿ : ಪಾಪ, ಇಬ್ರೂ ಚಳೀಲಿ ಮಲಗಿದಾರೆ .... ಏನಾದರೂ ಹೊದೆಸಿ ಹೋಗೋಣ.

ಚೆನ್ನ : ಬನ್ನಿ. ಇಲ್ಲಿ ಹೂವು ಉಂಟಲ್ಲ ಬೇಕಾದಷ್ಟು, ಅದನ್ನೇ ತಂದು ಹೊದೆಸೋಣ.

ಹೂವು ಕೊಯ್ದುತಂದು ಇಬ್ಬರ ಮೇಲೂ ಮೃದುವಾಗಿ ಹೊದೆಸಿ ಎಲ್ಲರೂ ಹೊರಡುತ್ತಾರೆ. ಆಚೆಯಿಂದ ಅವರ ಕೂಗು ಕೇಳಿಸುತ್ತದೆ. 'ಜಿಂದಾಬಾದ್, ಜಿಂದಾಬಾದ್, ಜಯಂಟ್ ಮಾವಾ ಜಿಂದಾಬಾದ್'...ಜಿಂದಾಬಾದ್ ಜಿಂದಾಬಾದ್, ಅಂಕಲ್ ಹನ್ನೂ ಜಿಂದಾಬಾದ್'....ಇತ್ಯಾದಿ



ಮಕ್ಕಳ ನಾಟಕ ● ಜಯಂಟ್ ಮಾಮ

ಒಂದು ಕಾಡಲ್ಲಿ ಅನಾದಿಕಾಲದಿಂದ ಒಬ್ಬ ದೈತ್ಯ ಅರಮನೆ ಕಟ್ಟಿಕೊಂಡು ವಾಸವಾಗಿದ್ದ. ಒಮ್ಮೆ ಅವನು ಆಫ್ರಿಕಾದ ಮಿತ್ರನೊಬ್ಬನನ್ನು ನೋಡಲು ಹೋಗಿದ್ದ. ಅಲ್ಲಿಂದ ವಾಪಸಾಗುವಾಗ ಎಷ್ಟೋ ವರ್ಷಗಳು ಸಂದುಹೋಗಿದ್ದವು. ಆ ಸಮಯದಲ್ಲಿ ಈ ಕಾಡಿನಲ್ಲಿ ಮನುಷ್ಯರು ಒಂದು ನದಿಗೆ ಕಟ್ಟೆಕಟ್ಟಿ ವಿದ್ಯುತ್ ಕೇಂದ್ರ ಸ್ಥಾಪಿಸಿದ್ದರು. ಅಲ್ಲಿ ಒಂದು ಔದ್ಯೋಗಿಕ ಕಾಲೊನಿ ನಿರ್ಮಿತವಾಗಿತ್ತು.

ಈ ಹಿನ್ನೆಲೆಯಲ್ಲಿ, ವಾಸ್ತವ ಕಾಲ್ಪನಿಕಗಳು ಸಂಯೋಜಿತವಾದ ಹೊಸ ಸೃಷ್ಟಿಯಲ್ಲಿ ಮಕ್ಕಳುಪಾಲುಗೊಂಡು ಕ್ರಿಯಾವಂತರಾಗುವ ರಂಗ ವೇದಿಕೆ ಈ ನಾಟಕ. ಪ್ರಯೋಗದಲ್ಲಿ ಯಶಸ್ಸು ಕಂಡಿರುವ ಈ ನಾಟಕ ಕನ್ನಡ ಮಕ್ಕಳಿಗೆ ಖುಷಿ ಕೊಡಬಹುದೆಂದು ಆಸೆ.

●

ಬೆಲೆ : ಐದು ರೂಪಾಯಿ

●

ಅಕ್ಷರ ಪ್ರಕಾಶನ ಸಾಗರ ಕರ್ನಾಟಕ ರಾಜ್ಯ ೫೭೭೪೦೧